# ಹೆಣ್ಣು ದೇಹ ಮತ್ತು ಪುರುಷಾಧಿಕಾರ

(ಕನ್ನಡ ವಿಶ್ವವಿದ್ಯಾಲಯ, ಹಂಪಿ ಜಾನಪದ ವಿಭಾಗಕ್ಕೆ
ಎಂ.ಫಿಲ್ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)



ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬



೨೦೦೬-೦೭

# ಪರಿವಿಡಿ

# ಪರಿವಿಡಿ

# ಹೆಣ್ಣ ದೇಹ ಮತ್ತು ಪುರುಷಾಧಿಕಾರ

**ಪ್ರವೇಶ :**

ಹೆಣ್ಣು ಮತ್ತು ಗಂಡಿನ ಲಿಂಗ ಸಂಬಂಧಗಳ ಹಿನ್ನೆಲೆಯಲ್ಲಿ ಹೆಣ್ಣಿನ ದೇಹದ ಬಗ್ಗೆ ವಿಶೇಷವಾದ ಗಮನವನ್ನು ಸಾಮಾಜಿಕ, ಚಾರಿತ್ರಿಕ ಸಾಂಸ್ಕೃತಿಕ ಹಾಗೂ ಧಾರ್ಮಿಕ ಮತ್ತು ಆರ್ಥಿಕ ಕಾರಣಗಳಿಂದ ನೀಡಬೇಕಾಗಿರುವುದು ಮುಖ್ಯವಾಗಿದೆ. ಹೆಣ್ಣಿನ ದೇಹದ ಬಗ್ಗೆ ಧರ್ಮ ಮತ್ತು ಸಂಸ್ಕೃತಿಯ ವಿಶಾಲ ಹರವಿನಲ್ಲಿ ಅನೇಕ ನಂಬಿಕೆಗಳಿವೆ. ಹಲವು ನಂಬಿಕೆಗಳಿಗೆ ಶುದ್ಧ ನೈಸರ್ಗಿಕ ಶಕ್ತಿಯ ಆಧಾರವಿದ್ದರೆ ಮತ್ತೆಷ್ಟೋ ಸಂಗತಿಗಳಿಗೆ ಪುರುಷರ ಪೂರ್ವಾಗ್ರಹಗಳೂ ನೆಲೆಯಾಗಿವೆ. ಲಿಂಗ ಸಂಬಂಧವನ್ನು ದೇಹದ ಮೂಲಕವೆ ಪುರುಷ ಸಮಾಜ ನಿರ್ಧರಿಸಿದೆ. ಹೆಣ್ಣಿನ ಜೈವಿಕ ಗುಣಗಳು ಆಕೆಯ ದೇಹವನ್ನು ರೂಪಿಸಿದ್ದು ಒಂದು ಕಡೆಗಿದ್ದರೆ ಅದೇ ಹೆಣ್ಣಿನ ದೇಹದ ಬಗ್ಗೆ ಪುರುಷರು ತೀರ್ಮಾನಿಸಿದ ಆರೋಪಗಳು ಮತ್ತೊಂದು ಕಡೆಗಿವೆ. ಹೆಣ್ಣಿನ ದೇಹದ ಬಗ್ಗೆ ಸಂಸ್ಕೃತಿಯು ಯಾವ ಬಗೆಯ ಮೌಲ್ಯ ವ್ಯವಸ್ಥೆಯನ್ನು ರೂಪಿಸಿದೆ ಎಂಬುದನ್ನು ಸ್ಥಳೀಯ ವಿವರಗಳಿಂದ ಪರಶೀಲಿಸಿದರೆ ನಮಗೆ ಈವರೆಗೆ ತಿಳಿಯದಿದ್ದ ಸಂಗತಿಗಳು ಅರಿವಿಗೆ ಬರುತ್ತವೆ. ಲಿಂಗ ಸಂಬಂಧಿ ನಿರ್ವಚನಗಳಿಗೆ ಈ ಬಗೆಯ ಸ್ಥಳೀಯ ಸಂಸ್ಕೃತಿಯ ವಿವರಗಳು ತುಂಬ ಮುಖ್ಯ.

ಮಾತೃ ಪ್ರಧಾನ ಕುಟುಂಬದಲ್ಲಿ ಇದ್ದ ಅನೇಕ ನಂಬಿಕೆಗಳು ಈಗಲೂ ಸಂಸ್ಕೃತಿಯ ರೂಪ ಧರಿಸಿ ಉಳಿದುಕೊಂಡಿರುವುದನ್ನು ಗಮನಿಸಬಹುದು. ಪಿತೃ ಪ್ರಧಾನ ಪುರುಷಾಧಿ ಪತ್ಯವು ಅಸ್ತಿತ್ವಕ್ಕೆ ಬಂದ ನಂತರವೆ ಹೆಣ್ಣಿನ ದೇಹದ ಬಗ್ಗೆ ಪೂರ್ವಗ್ರಹಗಳು ಬೆಳೆದುದು. ದೇಹದ ಕಲ್ಪನೆಯಲ್ಲಿ ತಾರತಮ್ಯ ಮೊಳೆತದ್ದು ಮೊದಲಿಗೆ ಗಂಡಸಿನ ಮನಸ್ಸಿನಿಂದಲೇ. ಪ್ರಖ್ಯಾತ ಮಹಿಳಾ ಚಿಂತಕಿಯರೆಲ್ಲರೂ ಈ ಅಭಿಪ್ರಾಯವನ್ನು ಒಪ್ಪುವವರೇ ಆಗಿದ್ದು ಪ್ರಸಿದ್ದ ಚಿಂತಕಿ ಸಿಮೋನ್ ದ ಬುವಾ ಅವರು ತಮ್ಮ ವಿಖ್ಯಾತ ಕೃತಿ 'ದಿ ಸೆಕೆಂಡ್ ಸೆಕ್ಸ್'ನಲ್ಲಿ ಈ ಬಗೆಯ ವಿಚಾರವನ್ನು ಗಂಭೀರವಾಗಿ ತಕ್ಕ ಆಧಾರಗಳ ಮೂಲಕ ಮಂಡಿಸಿದ್ದಾರೆ . ಬಹುಪಾಲು ಎಲ್ಲಿ ಭೌತಿಕ ಹಾಗು ಸಾಂಸ್ಕೃತಿಕ ಮಾನವ ಶಾಸ್ತ್ರಜ್ಞರು ಹೆಣ್ಣಿನ ದೇಹದ ಬಗೆಗಿನ ನಂಬಿಕೆಗಳನ್ನು ಲಿಂಗ ಸಂಬಂಧಗಳ ಹಿನ್ನೆಲೆಯಲ್ಲಿ ವಿಶ್ಲೇಷಿಸಿದ್ದಾರೆ. ಮನೋವಿಶ್ಲೇಷಣಕಾರರ ಆದ್ಯನಾದ ಪ್ರೊ ಸಿಗ್ಮಂಡ್ ಪ್ರಾಯ್ಡ್ ಲೈಂಗಿಕ ಭಾವನೆಗಳು ಹೇಗೆ ದೇಹ ಮತ್ತು ಮನಸ್ಸಿನ ಮೂಲಕ ಸಮಾಜ ಮತ್ತು ಸಂಸ್ಕೃತಿಗಳನ್ನು ರೂಪಿಸಿವೆ ಎಂಬದನ್ನು ಆತ್ಯಂತಿಕವಾಗಿ ಚರ್ಚಿಸಿದ್ದಾರೆ. ಪ್ರಾಯ್ಡ್ ಮುಖ್ಯವಾಗಿ ದೇಹ ಮತ್ತು ಮನಸ್ಸಿನ ಸಂಬಂಧಗಳಿಂದಲೆ ಹೆಣ್ಣು ಗಂಡಿನ ವಿಕಾಸ ಮತ್ತು ಆಕರ್ಷಣೆಗಳನ್ನು ಸಮರ್ಥಿಸಿದ್ದಾರೆ. ಲೈಗಿಂಕ ವಾಂಛೆಯನ್ನು ಪ್ರಾಯ್ಡ್ ಹೆಣ್ಣ ದೇಹದ ಮೂಲಕ ಗ್ರಹಿಸಿರುವುದನ್ನು ಇಲ್ಲಿ ವಿಶೇಷವಾಗಿ ಗಮನಿಸಬೇಕಾಗಿದೆ. ಪ್ರಾಯ್ಡ್ ತನ್ನ ಮನೋಸಿದ್ಧಾಂತವನ್ನು ಮಂಡಿಸಲು ಪ್ರಬಲವಾಗಿ ಆಯ್ಕೆಮಾಡಿಕೊಂಡಿರುವುದು ಹೆಣ್ಣ ದೇಹದ ಬಗೆಗಿನ ಮೋಹವನ್ನೆ (ಕೇವಲ ಕಾಮ ಭಾವನೆಯಲ್ಲ) ಮೋಹ ಭಾವವು ಆತ್ಯಂತಿಕವಾದ ಜೈವಿಕ ಗುಣ. ಇದು ವಿಕಾಸಕ್ಕೆ ಖಡ್ಡಾಯವಾಗಿ ಇರಬೇಕಾದ ನೀತಿ. ಎರಡು ವಿಭಿನ್ನ ಲಿಂಗಗಳ ನಡುವೆ ಮೋಹವೇ ಇಲ್ಲವಾದರೆ ಯಾವ ಜೈವಿಕ ಪ್ರಕ್ರಿಯೆಯು ಸಾಗುವುದಿಲ್ಲ. ಜೀವ ಜಾಲದ ಮೋಹ

ಕ್ರಿಯೆಗೆ ಹೆಣ್ಣು ಲಿಂಗ ಹಾಗೂ ಗಂಡು ಲಿಂಗ ಸಮಾಗಮವಾಗಲೇಬೇಕು. ಇದು ನೈಸರ್ಗಿಕ ನಿಯಮ. ಈ ನಿಯಮದ ಅನುಸರಣೆಯಲ್ಲಿ ಹೆಣ್ಣು ಗಂಡಿನ ಕೌಟುಂಬಿಕ ಸಂಬಂಧಗಳು ನಿರ್ಧಾರವಾಗಿ ಸಂಸ್ಕೃತಿ ಮತ್ತು ಲಿಂಗ ಸಂಬಂಧ ಬೆಳೆದಿರುವುದು. ಇಂತಹ ಹಿನ್ನೆಲೆಯನ್ನು ಆಧರಿಸಿ ದೇಹದ ಅಂತರಂಗದಲ್ಲಿರುವ ಮನಸ್ಸನ್ನು ಪ್ರಾಯ್ಡ್ ಪರಿಶೀಲಿಸಿದರು. ಇಲ್ಲಿ ಗಮನಿಸಬೇಕಾದ ಅಂಶವೇನೆಂದರೆ; ಪ್ರಾಯ್ಡ್ ತನ್ನ ಆಲೋಚನೆಯ ಪರಿಶೀಲನೆಗೆ ಹಾಗೂ ಸಂಶೋಧನೆಗೆ ಆಯ್ಕೆ ಮಾಡಿಕೊಂಡದ್ದು ಮಾತ್ರ ಪುರಷನ ಮನಸ್ಸಿನಲ್ಲಿರುವ ಸ್ತ್ರೀ ಮೋಹದ ಭಾವನೆಗಳನ್ನೇ ಹೊರತು ಸ್ವತಃ ಸ್ತ್ರೀಯ ಭಾವನೆಗಳನ್ನಲ್ಲ. ಸ್ತ್ರೀಯ ದೇಹದ ಮೇಲೆ ಗಂಡಿಗೆ ಇರುವ ಬಯಕೆಗಳನ್ನು ವಿಶೇಷವಾಗಿ ಪ್ರಾಯ್ಡ್ ಗಮನಿಸಿದ್ದಾರೆ. ಗಂಡು ಹೇಗೆ ಹೆಣ್ಣಿನ ಲೈಂಗಿಕ ಮೋಹಕ್ಕೆ ಒಳಗಾಗುವನು, ಆಕೆಯ ದೈಹಿಕ ಸಂಬಂಧಕ್ಕಾಗಿ ಆತ ಹೇಗೆ ಕನಸುವನು? ಎಂತಹ ರೀತಿಯಲ್ಲಿ ಆತ ಬಯಕೆಗಳನ್ನು ಪೂರೈಸಿಕೊಳ್ಳಬಲ್ಲನು ಎಂಬುದನ್ನು ಪುರುಷ ರೂಪದಲ್ಲಿ ಅಥವಾ ಪುರುಷ ಮನಸ್ಸಿನಿಂದ ಪ್ರಾಯ್ಡ್ ವಿಶ್ಲೇಷಿಸಿದ್ದಾರೆ. ಆದಿಮ ಸಂಸ್ಕೃತಿಯಲ್ಲಿ ಹೇಗೆ ಕಾಮವಾಂಚೆ ಬೆಳೆದಿದೆ? ಅದು ಹೆಣ್ಣನ್ನು ಯಾವ ಯಾವ ಸಂಕೇತಗಳಲ್ಲಿ ತೋರಿದೆ? ಸ್ತ್ರೀತ್ವದ ಪ್ರತಿಮೆಗಳ ಅರ್ಥವೇನು? ಬೆತ್ತಲೆ ದೇಹದ ಆಚರಣೆಗಳ ಮನಸ್ಥಿತಿ ಏನು ? ಎಂಬುದನ್ನು ಪ್ರಾಯ್ಡ್ ಅಧ್ಬುತವಾಗಿ ವಿಶ್ಲೇಷಿಸಿದ್ದರೂ ಅದೆಲ್ಲವೂ ಪುರುಷಪ್ರಧಾನ ಸಮಾಜದ ಆಲೋಚನೆಯ ಭಾಗವಾಗಿಯೆ ಬಂದಿರುವುದನ್ನು ಬಚ್ಚಿಡಲಾಗದು.

ಲಿಂಗ ಸಂಬಂಧಗಳ ಮಾನಸಿಕ ಹಾಗೂ ದೈಹಿಕ ಅಧ್ಯಯನಗಳಲ್ಲಿ ಈ ಮೇಲಿನ ಅಂಶವನ್ನು ಗಮನಿಸಬೇಕಾದುದು ಮುಖ್ಯವಾಗಿದೆ. ಪ್ರಾಯ್ಡ್ ಆಲೋಚನೆಯನ್ನೆ ಹಲವು ಕವಲುಗಳಲ್ಲಿ ಅನೇಕ ಮನೋವಿಜ್ಞಾನಿಗಳು ವಿಶ್ಲೇಷಿಸಿ ವಿಸ್ತರಿಸಿದ್ದರೂ ಹೆಣ್ಣದೇಹ ಮತ್ತು ಲೈಂಗಿಕ ಸಂಬಂಧಗಳ ವಿಚಾರಗಳು ಈಗಲೂ ಹಳೆಯ ಮಾದರಿಯಲ್ಲೆ ಮುಂದುವರೆದಿದೆ. ಹೆಣ್ಣಿನ ಮೇಲಿನ ಲೈಂಗಿಕ ದೌರ್ಜನ್ಯಗಳನ್ನು ವಿಶ್ಲೇಷಿಸಲು ಪ್ರಾಯ್ಡಿಯನ್. ಪರಿಕಲ್ಪನೆಗಳು ಪರಿಪೂರ್ಣವಲ್ಲ. ಗಂಡಸಿನ ಆಸಕ್ತಿಗಳನ್ನು ತಿಳಿಯಲು ಪ್ರಾಯ್ಡಿಯನ್ ಪರಿಕಲ್ಪನೆಗಳು ಸಹಕಾರಿಯಾಗಬಲ್ಲವು. ಅತ್ಯಾಚಾರಕ್ಕೊಳಪಟ್ಟವಳ ಮನಸ್ಸಿನ ವೇದನೆಗೂ ಅಂತಹ ಕೃತ್ಯವನ್ನು ಎಸಗಿದವನ ಭಾವನೆಗಳಿಗೂ ಅಗಾಧವಾದ ಅಂತರವಿದೆ. ಕೇವಲ ಲೈಂಗಿಕ ಇಚ್ಛೆಗಳ ಬೇರು ಹುಡುಕಿದರೆ ಪುರುಷ ಮನಸ್ಸಿನ ಪಾತಕ ಕ್ರಿಯೆಯನ್ನು ನಿಯಂತ್ರಿಸಿದಂತಾಗುವುದಿಲ್ಲ. ಬದಲಿಗೆ ಹೆಣ್ಣಿನ ವೇದನೆಯ ಮೂಲಕ ಇಡೀ ಪುರುಷ ಸಮಾಜದ ತಾರತಮ್ಯ ಹಾಗೂ ಅಕ್ರಮಣವನ್ನು ವಿಶ್ಲೇಷಿಸಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ಬೆತ್ತಲೆ ಸೇವೆ ಹಾಗೂ ಲೈಂಗಿಕ ಹಲ್ಲೆಗಳ ಸಾಂಸ್ಕೃತಿಕ ಯಾಜಮಾನ್ಯವನ್ನು ಧಾರ್ಮಿಕ ನಿಬಂಧನೆಗಳನ್ನು ಅಧ್ಯಯನ ಮಾಡಬೇಕಾದುದಿದೆ. ಹಾಗೆಯೆ ಪುರುಷ ಪೂರ್ವಾಗ್ರಹಗಳನ್ನು ಸ್ಥಳೀಯವಾದ ನಂಬಿಕೆ ಆಚರಣೆಗಳಿಂದ ಅರ್ಥಮಾಡಿಕೊಳ್ಳಬೇಕಾದ ಅವಶ್ಯಕತೆಯಿದೆ.

ಹಾಗೆಯೇ ಹೇಗೆ ದೇಹದ ಬಗೆಗಿನ ಪೂರ್ವಾಗ್ರಹವು ಸಾಮಾಜಿಕವಾದ ದುರುಂತಗಳನ್ನು ರೂಪಿಸಿದೆ ಎಂಬುದನ್ನು ಇಲ್ಲಿ ಗಮನಿಸಲು ಅವಕಾಶವಿದೆ. ಸಮಾಜದಲ್ಲಿ ಲಿಂಗ ಬೇಧವು ಅಸಮತೋಲನ ಬೆಳವಣಿಗೆಗೆ ದಾರಿ ಮಾಡುವುದಲ್ಲದೆ ಹೆಣ್ಣಿನ ಬಗ್ಗೆ ವಿಪರೀತ ಹಲ್ಲೆ ಅತ್ಯಾಚಾರ ಹಾಗೂ ಅನೇಕ ಬಗೆಯ ಅನೈತಿಕ

ಚಟುವಟಿಕೆಗಳು ವ್ಯಾಪಿಸಿಕೊಳ್ಳಲು ದಾರಿ ಮಾಡುತ್ತದೆ. ಒಂದು ಸಮಾಜದ ಶೀಲವಂತಿಕೆ ಇರುವುದು ಆ ಸಮಾಜ ಹೇಗೆ ಸ್ತ್ರೀ ಸಮುದಾಯವನ್ನು ನಡೆಸಿಕೊಳ್ಳುತ್ತ ಬಂದಿದೆ ಎಂಬುದರ ಮೇಲೆ ನಿರ್ಧಾರವಾಗುತ್ತದೆಯೆ ವಿನಃ ಆ ಸ್ತ್ರೀ ಹೇಗೆ ವರ್ತಿಸುತ್ತಾಳೆ ಎಂಬುದರ ಆಧಾರದಿಂದಲ್ಲ. ನಡತೆಗೆಟ್ಟವಳು ಎಂದರೆ ಆಕೆ ಮೂರೂ ಬಿಟ್ಟವಳು ಎಂಬ ನುಡಿಗಟ್ಟು, ಹೆಣ್ಣ ದೇಹದ ಮೇಲಿನ ಅಭಿಪ್ರಾಯದಿಂದ ಬಂದುದಾಗಿದೆ. ಹೆಣ್ಣ ಬುದ್ಧಿ ಮೊಣಕಾಲ ಕೆಳಗೆ ಎನ್ನುವ ಮಾತಿನ ಹಿನ್ನೆಲೆಯಲ್ಲಿ ಹೇಳುವುದಾದರೆ ಪುರುಷ ಪೂರ್ವಾಗ್ರಹವು ಭಾಷೆಯನ್ನು ಕೂಡ ಸಂಕುಚಿತಗೊಳಿಸಿ ಭಾಷೆಯನ್ನೇ ಪುರುಷಾಕಾರಕ್ಕೆ ತಕ್ಕಂತೆ ಎರಕ ಹೊಯ್ದುಕೊಂಡಿದೆ ಈ ಬಗೆಯ ಭೇದ ಕಲ್ಪನೆಗಳನ್ನು ದೇಹ ಮತ್ತು ಮನಸ್ಸಿನ ಮೂಲಕ ಅಧ್ಯಯನ ಮಾಡುವುದು ಸೂಕ್ತವಾಗಿದೆ.

## ವಿಷಯವ್ಯಾಪ್ತಿ:

ಸ್ಥೂಲವಾಗಿ ಹೆಣ್ಣಿನ ದೇಹದ ಬಗೆಗಿನ ಸಾಂಸ್ಕೃತಿಕ ಧಾರ್ಮಿಕ ಸಾಮಾಜಿಕ ಆರ್ಥಿಕ ಹಾಗೂ ಲಿಂಗಸಂಬಂಧಿ ನೆಲೆಯ ವ್ಯಾಪ್ತಿಯನ್ನು ಕುರಿತು ಈ ಅಧ್ಯಯನದಲ್ಲಿ ಪರಿಗಣಿಸಲಾಗಿದೆ ವಿಶೇಷವಾಗಿ ಬೆತ್ತಲೆ ಪೂಜೆಯನ್ನು ಜಾತಿ ಹಿನ್ನೆಲೆಯಲ್ಲಿ ಅವಲೋಕಿಸಿ ಹೇಗೆ ಬೆತ್ತಲೆ ಸೇವೆಯ ಪೂರಕ ವಿಷಯಗಳಾದ ದೇವದಾಸಿ ಪದ್ಧತಿ, ವೇಶ್ಯಾವಾಟಿಕೆಗಳನ್ನು ಕೂಡ ಪರಿಶೀಲಿಸಲಾಗಿದೆ. ಪುರುಷ ಮತ್ತು ಪ್ರಕೃತಿಯ ಪರಿಕಲ್ಪನೆಯಲ್ಲೂ ಹೆಣ್ಣು ಗಂಡಿನ ಲಿಂಗ ತಾರತಮ್ಯದ ಪುರುಷ ಮನಸ್ಸನು ಗಮನಿಸಲಾಗಿದ್ದು ಈ ವಿಶಾಲವಾದ ಚೌಕಟ್ಟನ್ನು ತಾತ್ವಿಕವಾಗಿ ನಿರ್ವಚಿಸಲಾಗಿದೆ. ಜಾಗತಿಕವಾಗಿ ಹೆಣ್ಣು ಗಂಡಿನ ದೈಹಿಕ ಹಾಗೂ ಮಾನಸಿಕ ವ್ಯಾಪಾರವನ್ನು ಇಲ್ಲಿ ಗಮನಿಸಲಾಗಿದೆ. ಇಂತಹ ದೊಡ್ಡ ವ್ಯಾಪ್ತಿಯ ವಿಷಯದ ಮೂಲ ಬೇರುಗಳಾದ ಲಿಂಗ ಶೋಷಣೆ, ಜಾತಿ ಶೋಷಣೆ ಮತ್ತು ಸಾಮಾಜಿಕ ಶಾಪಗಳನ್ನು ಗ್ರಹಿಸಲಾಗಿದೆ. ಸಾರ್ವತ್ರಿಕವಾದ ಇಂತಹ ವಿಶಾಲ ವಿಷಯದ ಶೋಷಣೆಯ ಜಾಡನ್ನು ವಿಶ್ಲೇಷಿಸಿವುದೇ ಇಲ್ಲಿ ಮುಖ್ಯ ಗಮನವಾಗಿದೆ. ಸ್ಥಳಿಯವಾದ ವಿವರಗಳ ಮೂಲಕವೆ ಜಾಗತಿಕವಾದ ಅಭ್ರಿಪ್ರಾಯಗಳನ್ನು ಜೊತೆಜೊತೆಗೆ ಅನುಸಂಧಾನ ಮಾಡಲಾಗಿದೆ. ಆದ್ದರಿಂದಲೆ ಹೆಣ್ಣ ದೇಹದ ಬಗೆಗಿನ ಮನೋ ವಿಶ್ಲೇಷಣೆಯನ್ನು ಕೂಡ ಅಧ್ಯಯನದ ವ್ಯಾಪ್ತಿಗೆ ಅಳವಡಿಸಿಕೊಳ್ಳಲಾಗಿದೆ. ಅಲ್ಲದೆ ಪುರುಷ ಸಮಾಜದ ಸ್ವಭಾವ ಮತ್ತು ಧಾರ್ಮಿಕ ಪ್ರಭುತ್ವದ ದಬ್ಬಾಳಿಕೆಯನ್ನು ವಿಷಯದ ಕೇಂದ್ರದಲ್ಲಿ ಸಂಯೋಜಿಸಲಾಗಿದೆ.

## ಅಧ್ಯಯನ ವಿಧಾನ:

ಲಿಂಗ ಸಂಬಂಧಿ ತಾರತಮ್ಯದ ಅಧ್ಯಯನಕ್ಕೆ ಹಲವು ಬಗೆಯ ಅಧ್ಯಯನ ಸಾಧ್ಯತೆಗಳಿವೆ. ಇಲ್ಲಿ ವಿಶೇಷವಾಗಿ ತಾತ್ವಿಕವಾಗಿ ವಿಶ್ಲೇಷಣ ಮಾದರಿಯ ಅಧ್ಯಯನದ ಜೊತೆಗೆ ಸಾಮಾಜಿಕ ನ್ಯಾಯದ ಕ್ರಮವನ್ನು ಅನುಸರಿಸಲಾಗಿದೆ. ಬೌದ್ಧಿಕವಾದ ನಿರ್ವಚನ ಕ್ರಮಕ್ಕೆ ಸಮಾಜ ಶಾಸ್ತ್ರೀಯ ಹಾಗೂ ಸಾಂಸ್ಕೃತಿಕ ಆವರಣದ ಅಧ್ಯಯನ ವಿಧಾನಗಳನ್ನು ಅಳವಡಿಸಿಕೊಳ್ಳಲಾಗಿದೆ. ಇದನ್ನೆ ದೇಶಿ ಅಧ್ಯಯನ ವಿಧಾನ ಎಂತಲು ಕರೆದುಕೊಳ್ಳಲಾಗಿದ್ದು ಸ್ಥಳಿಯ ಸಮಾಜದ ಸಾಮಾಜಿಕ ನ್ಯಾಯದ ಆಶಯವನ್ನು ಅನ್ವಯಿಸಲಾಗಿದೆ. ಕೆಲವೊಮ್ಮೆ ಕ್ಷೇತ್ರ ಕಾರ್ಯ ವಿಧಾನವನ್ನು ಅನುಸರಿಸಲಾಗಿದೆ. ಒಟ್ಟಿನಲ್ಲಿ ಇಲ್ಲಿ ವಿಶೇಷವಾಗಿ ಸ್ತ್ರೀ ಅಧ್ಯಯನ

ವಿಧಾನವೆನ್ನಬಹುದಾದ ಸಾಮಾಜಿಕ ನ್ಯಾಯದ ಕ್ರಮ ಮುಖ್ಯವಾಗಿದೆ. ಇಲ್ಲಿನ ಅಧ್ಯಯನಕ್ಕೆ ಮಹಿಳೆಯಾಗಿ ನಾನು ಧಾರಣ ಮಾಡಿಕೊಂಡಿರುವ ಸಂಗತಿಗಳೆ ಮುಖ್ಯ ಆಕಾರಗಳು ಆಗಿವೆ. ಆಕಾರಗಳನ್ನು ಕೇವಲ ದತ್ತಕವಾಗಿ ತೆಗೆದುಕೊಳ್ಳದೆ ಆ ಎಲ್ಲ ಅಂಶಗಳನ್ನು ಮಹಿಳಾ ಸಮಾಜದ ಸಮೀಕ್ಷೆ ಜೀವನ ದರ್ಶನವಾಗಿ ಭಾವಿಸಲಾಗಿದೆ. ಹೀಗಾಗಿ ಈ ಅಧ್ಯಯನದಲ್ಲಿ ಸ್ತ್ರೀ ನಿಷ್ಠ ಅಂತೆಯೆ ಮಾನವ ನಿಷ್ಠೆ ಅಧ್ಯಯನದ ಆಶಯಗಳನ್ನು ಅನುಸರಿಸಲಾಗಿದೆ. ಜೊತೆಗೆ ಪ್ರಗತಿಶೀಲವಾದ ಆಲೋಚನ ವಿಧಾನವನ್ನು ಬರಹದ ಮುಖ್ಯ ಆಶಯವಾಗಿ ಬೆರಸಿಕೊಳ್ಳಲಾಗಿದ್ದು ಇಲ್ಲೆಲ್ಲ ಸ್ತ್ರೀ ಮನಸ್ಸಿನ ಸಮಷ್ಠಿ ಭಾವನೆಯನ್ನೆ ಬಿಂಬಿಸಲಾಗಿದೆ. ಸೃಜನಶೀಲವಾದ ಆಲೋಚನಾ ಕ್ರಮಗಳನ್ನು ಅಳವಡಿಸಿಕೊಂಡಿರುವ ಕಾರಣ ಇಂತಹ ಅಧ್ಯಯನಕ್ಕೆ ಶುಷ್ಕವಾದ ಪಶ್ಚಿಮದ ಅಧ್ಯಯನ ಚೌಕಟ್ಟುಗಳನ್ನು ಅನುಸರಿಸಲು ವಿಶೇಷಗಮನ ನೀಡಲಾಗಿಲ್ಲ. ಸ್ವಂತ ಅರಿವು ಸ್ವಂತ ನೆಲೆ ಸ್ವಂತ ಗ್ರಹಿಕೆಗಳ ಮೂಲಕ ಸಮಾಜದ ಕೊನೆಯ ಮಹಿಳೆಯರ ಆಶಯವನ್ನು ಅಳವಡಿಸಿಕೊಂಡು ಹೆಣ್ಣ ದೇಹದ ಮೇಲಿನ ಹಿಡಿತಗಳನ್ನು ಅಧ್ಯಯನ ಮಾಡಲಾಗಿದೆ

## ಅಧ್ಯಯನ ಮಹತ್ವ:

ಲಿಂಗ ತಾರತಮ್ಯವು ಭವಿಷ್ಯದ ಸಮಾಜಕ್ಕೆ ತಕ್ಕುದಾದುದಲ್ಲ. ಸಮಾನ ಲಿಂಗ ಸಮಾಜದ ಅವಶ್ಯಕತೆಗಾಗಿ ಲಿಂಗ ಭೇದ ಹಾಗೂ ಹಿಂಸೆಯ ವಿರುದ್ಧದ ಆಲೋಚನೆಗಳನ್ನು ಮಾಡಬೇಕಾಗಿದೆ. ಈ ಹಿನ್ನೆಲೆಯಲ್ಲಿ ಹೆಣ್ಣದೇಹ ಮತ್ತು ಪುರುಷಾಧಿಪತ್ಯವನ್ನು ಅಧ್ಯಯನಕ್ಕೆ ಒಳಪಡಿಸಿ ಸೂಕ್ತ ಪರಿಹಾರಗಳನ್ನು ರೂಪಿಸಬೇಕಾಗಿದೆ. ಸಮಾಜದ ಅನೇಕ ಅನಿಷ್ಟ ಆಚರಣೆಗಳನ್ನು ಕಿತ್ತು ಹಾಕಲು ಮಾಡುವ ಯತ್ನದಲ್ಲಿ ಇಂತಹ ಶೈಕ್ಷಣಿಕ ಹಾಗೂ ಬೌದ್ಧಿಕ ಯತ್ನಗಳು ತುಂಬ ಮಹತ್ವದ್ದಾಗುತ್ತದೆ. ಪೂರ್ವಾಗ್ರಹಗಳನ್ನು ಮೀರಲು ಇದರಿಂದ ಸಾಧ್ಯ. ಹೆಣ್ಣುಗಂಡಿನ ಸಮಾನ ಜೀವನ ಕ್ರಮವನ್ನು ರೂಪಿಸಬೇಕಾದ ಹೊತ್ತಿನಲ್ಲಿ ಲಿಂಗ ಶೋಷಣೆಯ ಬಲೆಯನ್ನು ಕಿತ್ತುಹಾಕಬೇಕು ಅಂತಹ ಯತ್ನಕ್ಕೆ ಈ ಬಗೆಯ ಅಧ್ಯಯನಗಳು ಸಹಕಾರಿಯಾಗಿವೆ. ಅಭಿವೃದ್ಧಿ ಪ್ರಗತಿ, ವಿಕಾಸ ಎಂಬ ಈ ಮೂರು ಕ್ರಮಗಳು ಸಮಾನ ವೇಗದಲ್ಲಿ ನಡೆಯಬೇಕಾದುದಿದೆ. ಲಿಂಗ ಸಮಸ್ಯೆಯಿಂದ ಮಾನವ ವಿಕಾಸದ ಕ್ರಮವು ಆಳತೆ ತಪ್ಪು ವಂತಾಗಿದೆ. ಈ ದಿಸೆಯಲ್ಲಿ ಸಮಾಜದ ಬೇರೆ ಬೇರೆ ಕಾಲಘಟ್ಟಗಳನ್ನು ಜಾತಿ, ಲಿಂಗ, ವರ್ಗ, ಧರ್ಮ, ಸಂಸ್ಕೃತಿ, ಚರಿತ್ರೆ ಸಾಹಿತ್ಯ ಮುಂತಾದ ಸಮಸ್ಯೆಗಳನ್ನು ಹೊಸ ಕಾಲದ ಅಗತ್ಯಕ್ಕೆ ತಕ್ಕಂತೆ ಪುನರ್ ರಚಿಸಬೇಕಾದ ಒತ್ತಡವಿದೆ. ಈ ಕಾಲದ ವೈಚಾರಿಕ ಜಾಗೃತಿಗೆ ಪೂರಕವಾದ ಶೈಕ್ಷಣಿಕ ಸಂಶೋಧನಾತ್ಮಕ ಪರಿಸರವನ್ನು ಬೆಳೆಸಲು ಈ ಬಗೆಯ ಅಧ್ಯಯನಗಳಿಂದಲೂ ಸಾಧ್ಯ. ಎಲ್ಲ ಮಾನವಿಕ ವಿಜ್ಞಾನಗಳು ತಂತ್ರಜ್ಞಾನ ಮತ್ತು ವಿಜ್ಞಾನದ ಬೆಳವಣಿಗೆಯಿಂದ ಹಿಂದೆ ಸರಿಯುತ್ತಿರುವಾಗ ಲಿಂಗ ತಾರತಮ್ಯವನ್ನು ಹೆಣ್ಣ ದೇಹದ ನೆಲೆಯಿಂದ ವಿಶ್ಲೇಷಿಸುವುದರಿಂದ ಜ್ಞಾನ ಪರಂಪರೆಗಳನ್ನು ಅನ್ವಯಿಕವಾಗಿ ಕಟ್ಟಿಕೊಳ್ಳಲು ದಾರಿಯಾಗುತ್ತದೆ.

ಕರ್ನಾಟಕದಲ್ಲಿ ರೂಢಿಯಿರುವ ಬೆತ್ತಲೆ ಸೇವೆ, ದೇವದಾಸಿ ಪದ್ಧತಿ, ವೇಶ್ಯಾವಾಟಿಕೆಯಂತಹ ಹಲವು ಅನಿಷ್ಟಗಳ ಅಧ್ಯಯನದ ಹಿಂದೆ ಅಖಂಡವಾದ ಮಾನವ ಹಕ್ಕುಗಳ ಪ್ರತಿಪಾದನೆಯ ಜೊತೆಗೆ ಲಿಂಗ ಭೇದ ಮೀರಿದ ಮಾನವ ಸಮೂಹದ ಭವಿಷ್ಯವನ್ನು ಕಂಡುಕೊಳ್ಳುವುದೂ ಇದೆ. ಇಂತಹ ದೊಡ್ಡ ಆಶಯಗಳ ಹಿಂದೆ ಸಾಗುವಾಗ ನಾವು ನಮ್ಮ ನಾಡಿನ ಹಿನ್ನೆಲೆಯನ್ನು ಇಲ್ಲಿನ ಸಂಸ್ಕೃತಿ ಚರಿತ್ರೆಯ ಸಂದರ್ಭವನ್ನು ಅರಿಯಲು ಸಾಧ್ಯವಾಗುತ್ತದೆ. ಇಂತಹ ಉದ್ದೇಶದ

ಈ ಅಧ್ಯಯನವು ಸಾಮಾಜಿಕ ನ್ಯಾಯದ ಒತ್ತಾಯವು ಆಗುವುದರಿಂದ ಇದೊಂದು ಜವಾಬ್ದಾರಿಯುತವೂ ಸಾಂಸ್ಕೃತಿಕ ಮಹತ್ವದ ಅಧ್ಯಯನವು ಆಗಿದ್ದು ಸ್ತ್ರೀ ಸಂವೇದನೆಯ ನಿರೂಪಣೆಯ ಮೌಲಿಕತೆಯನ್ನು ಒಳಗೊಂಡಿದೆ

## ಅಧ್ಯಯನದ ಸಾಧ್ಯತೆ:

ಈ ಬಗೆಯ ನೆಲೆಯ ಇಂತಹ ಅಧ್ಯಯನವು ಹಲವಾರು ಸಾಧ್ಯತೆಗಳನ್ನು ಒಳಗೊಂಡಿದೆ. ಆ ಅಂಶಗಳನ್ನು ಕೆಳಕಂಡಂತೆ ಗಮನಿಸಬಹುದಾಗಿದೆ.

- ಹೆಣ್ಣು ಗಂಡಿನ ಅಂತರವನ್ನು ನಿವಾರಿಸಿ ಬಹುರೂಪಿಯಾದ ಅಧ್ಯಯನ ನೆಲೆಗಳನ್ನು ವಿಸ್ತರಿಸಿಕೊಳ್ಳಲು ಸಾಧ್ಯವಿದೆ.
- ಜಾತಿ ಮತ್ತು ಲಿಂಗ ತಾರತಮ್ಯದ ಅಂತರ್ ಸಂಬಂಧ ಹಾಗೂ ವೈರುಧ್ಯಗಳನ್ನು ವಿಶ್ಲೇಷಿಸುವ ಪರ್ಯಾಯಗಳನ್ನು ರೂಪಿಸಿಕೊಳ್ಳಬಹುದು.
- ಪುರುಷ ಪೂರ್ವಾಗ್ರಹದ ಮನಸ್ಥಿತಿಯನ್ನು ಬಿಡಿಸಿನೋಡಲು ಅನುವಾಗುತ್ತದೆ. ಹಾಗೆಯೇ ಪುರುಷಾಧಿಪತ್ಯಕ್ಕೆ ತಕ್ಕ ಚಿಕಿತ್ಸೆಯ ಮಾರ್ಗವನ್ನು ಹುಡುಕಲು ಸಾಧ್ಯವಾಗುತ್ತದೆ.
- ಸಾಮಾಜಿಕ ವ್ಯವಸ್ಥೆಯಲ್ಲಿ ಹೆಣ್ಣಿನ ಪಾತ್ರವನ್ನು ತಿಳಿಯುವುದರ ಜೊತೆಗೆ ಆಕೆಯ ಅವಕಾಶ ಮತ್ತು ಹಕ್ಕು ಬಾಧ್ಯತೆಗಳನ್ನು ರೂಪಿಸಲು ವಿಭಿನ್ನ ಅಧ್ಯಯನ ಮಾದರಿಗಳನ್ನು ಕಂಡುಕೊಳ್ಳಲು ಅವಕಾಶಗಳಿವೆ.
- ಕುಟುಂಬದ ಭಾವನಾತ್ಮಕ ಸಂಬಂಧಗಳನ್ನು ಪರಿಶೀಲಿಸಿ ಹೆಣ್ಣಿನ ಮೇಲಿನ ಪುರುಷಾಧಿಪತ್ಯದ ಹಿಡಿತವನ್ನು ಬಿಡಿಸಲು ಸಾಧ್ಯವಾಗುತ್ತದೆ.
- ಹೆಣ್ಣು ದೇಹದ ಮೇಲಿನ ಹಲ್ಲೆಯ ಬಹುರೂಪಿ ಧಾರ್ಮಿಕ, ಸಾಂಸ್ಕೃತಿಕ ನಿಯಂತ್ರಣಗಳನ್ನು ಅಂತರ್ ಶಿಸ್ತೀಯ ನೆಲೆಗಳಿಂದ ವಿಶ್ಲೇಷಿಸಲು ಸಾಧ್ಯವಾಗುತ್ತದೆ.
- ಹೊಸ ಬಗೆಯ ಸ್ತ್ರೀ ಮನಶ್ಶಾಸ್ತ್ರವನ್ನು ರೂಪಿಸಿ ಆ ಮೂಲಕ ಸ್ತ್ರೀ ಸಂವೇದನೆಯ ಸಾಂಸ್ಕೃತಿಕ ಮನಸ್ಸನ್ನು ಪ್ರತಿಪಾಧಿಸಲು ಅವಕಾಶಗಳಿವೆ. ಅಂತೆಯೆ ಹೆಣ್ಣಿನ ಮನಸ್ಸಿನ ಅಭಿವ್ಯಕ್ತಿಯ ಹಲವು ವಿಭಿನ್ನ ಆಯಾಮಗಳನ್ನು ಕಂಡುಕೊಳ್ಳಲು ಸಾಧ್ಯವಾಗುತ್ತದೆ.

ಹೀಗೆ ಹೆಣ್ಣ ದೇಹ ಮತ್ತು ಪುರುಷಾಧಿಪತ್ಯದ ವ್ಯಾಪ್ತಿಯ, ಈ ಮುಖ್ಯ ವಿಷಯವು ಹಲವಾರು ರೀತಿಯಲ್ಲಿ ಹಿಡಿಯಾಗಿ ಬಿಟ್ಟ ಪುರುಷ ಸಮಾಜದ ಮುಖವಾಡಗಳನ್ನು ಬಿಡಿಸಲು ಮುಂದಾಗುತ್ತದೆ. ಹೆಣ್ಣ ದೇಹದ ಬಗೆಗಿನ ವಿಸ್ತಾರವಾದ ಪೂರ್ವಾಗ್ರಹಗಳ ಅಸಂಖ್ಯರೂಪಗಳನ್ನು ಅಧ್ಯಯನ ಮಾಡಿದಷ್ಟು ಪುರುಷರ ನಾಗರೀಕತೆ, ಧರ್ಮ, ಸಂಸ್ಕೃತಿ, ಸಮಾಜ, ಸಾಹಿತ್ಯ, ಭಾಷೆ, ಚರಿತ್ರೆ, ಅವರ ಆರ್ಥಿಕ ನಿಯಮಗಳೆಲ್ಲವೂ ಸ್ಪಷ್ಟವಾಗಿ ಗೋಚರಿಸ ತೊಡಗುತ್ತದೆ. ಲೈಂಗಿಕ ಶೋಷಣೆಯ ಜೊತೆಯಲ್ಲೆ ಹೇಗೆ ಇಡೀ ಸ್ತ್ರೀ ಸಮುದಾಯವನ್ನೇ ಪುರುಷ ವಕ್ರತೆಯು ದಂಡಿಸಿದೆ ಎಂಬುದನ್ನು ಅನಿವಾರ್ಯವಾಗಿ ಹೇಳುತ್ತವೆ. ಪುರುಷರ ಅಪರಾಧಗಳನ್ನು ಮನ್ನಿಸಿ ಸಮಾನ ಜೀವನ ದರ್ಶನದ ಕಡೆಗೆ ಸಾಗುವ ದಾರಿಯನ್ನು ಕಂಡು ಕೊಳ್ಳಬೇಕಾಗಿದೆ. ಭಿನ್ನ ಲಿಂಗ ದ್ವೇಷಕ್ಕಿಂತ ಭಿನ್ನ ಲಿಂಗ ಪ್ರೀತಿ ಪ್ರೇಮ ಮಾನವತ್ವವೇ ಮುಖ್ಯ ಗುರಿಯಾಗಬೇಕು. ಈ ನಿಟ್ಟಿನಲ್ಲಿ ಈ ಪುಟ್ಟ ಪ್ರಬಂಧದ ವ್ಯಾಪ್ತಿಯಲ್ಲಿ ಆ ಬಗೆಗಿನ ಯತ್ನವನ್ನು ಕರ್ನಾಟಕದ ಸ್ಥಳೀಯ ವಿವರ ಹಾಗು ಹಿಂದೂ ಧರ್ಮದ ನಂಬಿಕೆಗಳ ಜೊತೆಗಿನ ಮುಖಾಮುಖಿಯಿಂದ ನಿರ್ವಚಿಸಲಾಗಿದೆ.

# ಹೆಣ್ಣ ದೇಹದ ಮೇಲಿನ ಸಾಂಸ್ಕೃತಿಕ ಯಾಜಮಾನ್ಯ

ಲಿಂಗ ಸಂಬಂಧ ನೈಸರ್ಗಿಕವಾದರೂ ಅದರ ಸಾಮಾಜಿಕ ಆರ್ಥಿಕ ಸಂಬಂಧ ಮಾತ್ರ ಮಾನವ ನಿರ್ಮಿತವಾದುದು. ಸ್ತ್ರೀ ಸಮೂಹವು ನಿರಂತರವಾಗಿ ನೈಸರ್ಗಿಕ ಮೌಲ್ಯಗಳ ಮೂಲಕ ಗುರಿತಿಸಿಕೊಂಡರೆ ಪುರಷನು ಯಾವತ್ತೂ ಅಧಿಕಾರ ಮತ್ತು ಪ್ರಭುತ್ವದ ನೆಲೆಯಿಂದಲೇ ತನ್ನ ಚಹರೆ ಹಾಗು ಅಸ್ಥಿತ್ವವನ್ನು ಬೆಳೆಸಿಕೊಂಡು ಬಂದನು. ಮಾನವ ಸಮೂಹದ ವಿಕಾಸದಲ್ಲಿ ಲಿಂಗ ತಾರತಮ್ಯವೇ ಅನೇಕ ಬಗೆಯ ಶೋಷಣೆಗಳಿಗೆ ಎಡೆಮಾಡಿಕೊಟ್ಟಿತು. ಮಾತೃ ಪ್ರಧಾನ ವಾಸದ ನೆಲೆಯ ಮೇಲೆ ಕಾಲನಂತರ ಅಧಿಕಾರ ಸ್ಥಾಪಿಸಿ ಅದರ ಅಸ್ತಿತ್ವವನ್ನು ಬದಲಿಸಿ ತನ್ನ ಅಸ್ತಿತ್ವವನ್ನು ರೂಪಿಸಿಕೊಂಡ ಪುರುಷಾಧಿಪತ್ಯವು ಎಲ್ಲದರಲ್ಲು ಜಾಲ ರೂಪಿಸಿದೆ. ಹೆಣ್ಣಿನ ದೇಹವನ್ನು ತನ್ನ ದೇಹದ ಅಧೀನ ಎಂದು ತಿಳಿದಿದ್ದರ ಪರಿಣಾಮವಾಗಿ ಪುರುಷನು ಆಕೆಯ ದೇಹದ ಮೇಲೆ ಅಧಿಕಾರ ಹೇರಿದನು. ಇದು ಒಂದು ಸಂಕೀರ್ಣ ಮನಸ್ಥಿತಿ. ಹೆಣ್ಣಿನ ದೇಹದ ಮೇಲೆ ಪುರುಷ ಯಾಕೆ ಅಧಿಕಾರ ಬದ್ಧನಾದ? ಹೆಣ್ಣು ಯಾಕೆ ಪುರುಷನ ಇಂತಹ ಭಾವನೆಯ ಮುಂದೆ ಅಧೀನಳಾದಳು? ಪುರುಷ ಸಮಾಜ ಯಾಕೆ ಎಲ್ಲ ಹಂತದಲ್ಲೂ ಹೆಣ್ಣಿನ ಮೇಲೆ ನಿಯಂತ್ರಣ ಸಾಧಿಸಲು ಮುಂದಾಯಿತು? ಹೆಣ್ಣಿನ ಲೈಂಗಿಕ ಭಾವನೆಗಳನ್ನು ಯಾಕೆ ಪುರುಷನು ತನ್ನ ಸ್ವತ್ತು ಎಂದು ಘೋಷಿಸಿದ ಎಂಬ ಇಂತಹ ಮೂಲಭೂತ ಪ್ರಶ್ನೆಗಳನ್ನು ಈ ನಿಬಂಧದ ಹಿನ್ನೆಲೆಯಲ್ಲಿ ಮೊದಲು ಚರ್ಚಿಸುವ.

ಮಾನವ ಸಮೂದಯದ ವಿಕಾಸದಲ್ಲಿ ಲೈಂಗಿಕ ಭಾವನೆಯು ಅತ್ಯಂತ ಸಹಜ ಹಾಗೂ ನೈಸರ್ಗಿಕವಾದ ಪ್ರಕ್ರಿಯೆ. ಲೈಂಗಿಕ ಸಂಬಂಧಗಳಿಂದಲೇ ಮಾನವ ಸಮುದಾಯಗಳು ಬೆಳೆದು ಬಂದದ್ದು. ನಿರ್ಸಗದ ಸೃಷ್ಠಿಶಕ್ತಿಯು ವಿಶೇಷವಾಗಿ ಹೆಣ್ಣಿನ ಮೂಲಕ ಕಂಡು ಬಂದಿದ್ದರಿಂದ ಪುರುಷನು ಹೆಣ್ಣನ್ನು ದೈವಿಕವಾಗಿ ಕಂಡನು. ಅಂತೆಯೇ ಸ್ತ್ರೀಗೆ ಇರುವಷ್ಟು ಸಷ್ಟಿ ಶಕ್ತಿಯು ಪುರುಷನಿಗೆ ಇಲ್ಲ ಎಂಬ ಅನುಮಾನವು ಪುರುಷನಿಗಿತ್ತು. ಆದ್ದರಿಂದಲೆ ಆತ ಹೆಣ್ಣ ಸೃಷ್ಠಿ ದೈವದ ಸಂಬಂಧಿ ಎಂದು ಭಾವಿಸಿದ. ಇಂತಹ ನಂಬಿಕೆಗಳ ಆಧಾರದ ಮೇಲೆ ಮಾತೃ ಪ್ರಧಾನ ಕುಟುಂಬವು ಉಗಮವಾಯಿತು. ಅಲ್ಲದೆ ಲೈಗಿಂಕ ಆಕರ್ಷಣೆ ಸ್ತ್ರೀಗೆ ವಿಶೇಷವಾಗಿತ್ತು. ಭಾವನೆಗಳನ್ನು ಉದ್ದೀಪಿಸುವ ನೈಸರ್ಗಿಕ ಶಕ್ತಿ ಹೆಣ್ಣಿಗಿದಿದ್ದರಿಂದ ಪುರುಷನು ಆಕೆಯ ಮುಂದೆ ಮೃದುವಾಗುವ ಆಕೆಯ ಬಯಕೆಗೆ ತಕ್ಕಂತೆ ನಡೆದುಕೊಳ್ಳುವ ಹಾಗು ಆಕೆಯ ಜೊತೆಯೇ ವಾಸವಾಗುವ ಸ್ವಭಾವ ಬೆಳೆಯಿತು. ಇದರಿಂದ ಮಾತೃ ಪ್ರಧಾನ ಕೌಟುಂಬಿಕ ಹಾಗು ಸಾಮಾಜಿಕ ಮೌಲ್ಯಗಳು ವಿಸ್ತರಿಸಿದವು. ಆದರೆ ಈ ಬಗೆಯ ನಂಬಿಕೆಗಳು ಕಾಲಾನಂತರದಲ್ಲಿ ಬದಲಾಗಿ ನಾಗರೀಕತೆಗಳು ಬೆಳೆದಂತೆಲ್ಲ ಗಂಡಿನ ಪಾತ್ರ ಪ್ರಧಾನವಾಗಿ ಹೆಣ್ಣಿನ ಸ್ಥಾನವು ಕುಗ್ಗಿತು.

ಹೆಣ್ಣಿನ ಮೇಲಿದ್ದ ನಂಬಿಕೆಗಳು ಬದಲಾಗಲು ಕಾರಣಗಳು ಏನೀದ್ದವೆಂಬುದು ಖಚಿತವಾಗಿಲ್ಲದಿದ್ದರೂ ಕೆಲವು ಅಂಶಗಳನ್ನು ಊಹೆ ಮಾಡಬಹುದು.

★ ಹೆಣ್ಣಿನ ಸಹಜ ನೈಸರ್ಗಿಕ ಶಕ್ತಿಗಳು ಸ್ವತಃ ಹೆಣ್ಣಿನ ಮೂಲದಿಂದ ಬಂದವಲ್ಲ, ಅವು ನೇರವಾಗಿ ನಿಸರ್ಗದಿಂದಲೇ ಆಕೆಗೆ ಬಂದವಾಗಿವೆಯೆ ಹೊರತು ಆಕೆಯ ಸ್ವಯಂಸರ್ವಶಕ್ತಳಲ್ಲ ಎಂಬುದು.

★ ಕಾಣದ ಕೈಯ ನಿಯಂತ್ರಣವೊಂದು ಪುರುಷನ ಲೈಂಗಿಕ ಶಕ್ತಿಯ ಮೂಲಕ ಹೆಣ್ಣಿಗೆ ಸೃಷ್ಟಿಸುವ ಗುಣವನ್ನು ತಂದಿದೆ ಎಂಬುದು.

★ ಸ್ವತಃ ಪುರುಷನಿಂದಲೇ ಹೆಣ್ಣು ಗರ್ಭ ಧರಿಸುತ್ತಾಳೆ ಎಂಬುದು. ಪುರುಷನ ಸಹಯೋಗವಿಲ್ಲದೆ ಹೆಣ್ಣು ಏನನ್ನು ಸೃಷ್ಟಿಸಲಾರಳು ಎಂಬ ಗುಟ್ಟನ್ನು ತಿಳಿದುಕೊಂಡದ್ದು.

★ ಸಹಜವಾಗಿಯೆ ಪುರುಷನ ಸ್ವಭಾವದಲ್ಲಿ ಮೇಲರಿಮೆ ಹಾಗು ಆಳುವ ಗುಣಗಳು ಬೆಳೆದುಬಂದದ್ದು.

★ ಹೆಣ್ಣಿನ ಕೋಮಲ ಭಾವನೆ ಹಾಗು ಸಹನಾ ಸ್ವಭಾವ.

★ ಕುಟುಂಬದಲ್ಲಿ ಗಂಡಿನ ಪಾತ್ರ ಹೆಚ್ಚಾದುದು.

★ ಧಾರ್ಮಿಕ ನಂಬಿಕೆಗಳು ಪುರಷನಲ್ಲಿ ಕೇಂದ್ರೀಕೃತವಾದದ್ದು.

★ ಆಸ್ತಿಯ ಕಲ್ಪನೆ ಬೆಳೆದು ಖಾಸಗೀ ಒಡೆತನ ಗಂಡಿಸಿನಲ್ಲಿ ಜಾಗೃತವಾದದ್ದು.

★ ಪುರುಷ ಪ್ರಧಾನ ಸಾಮಾಜಿಕ ಮೌಲ್ಯಗಳು ಆಕ್ರಮಿಸಿಕೊಂಡಿದ್ದು.

★ ಹುಟ್ಟಿದ ಮಕ್ಕಳಿಗೆ ತಂದೆಯ ಮೂಲಕ ಗುರುತು ನೀಡುವ ಕ್ರಮ ಜಾರಿಗೆ ಬಂದದ್ದು.

★ ಸ್ತ್ರೀ ಸಮುದಾಯದ ಸಂಸ್ಕೃತಿ ನೀತಿಗಳು ಅಧಿಕಾರ ಕಳೆದುಕೊಂಡದ್ದು.

★ ಹೆಣ್ಣಿನ ದೇಹ ಸೃಷ್ಟಿಸುವ ಶಕ್ತಿ ಹೊಂದಿದ್ದರೂ ಆಕೆಯ ಜನನಾಂಗಗಳು ಹೊಲಸು ಎಂಬ ಅಂಧ ವಿಶ್ವಾಸ ಮೂಡಿದುದು.

★ ಗಂಡಸೆ ಸರ್ವಶಕ್ತಿ, ಆತನೆ ನೇರವಾಗಿ ದೈವದ ಜೊತೆ, ಕಾಣದ ಕೈಯ ಜೊತೆ ಸಂಪರ್ಕ ಸಾಧಿಸಲು ಯೋಗ್ಯ ಎಂಬ ಮೇಲರಿಮೆ ಮೂಡಿದುದು.

★ ಹೆಣ್ಣಿನ ಸಂವೇದನಾಶೀಲ ಗುಣಗಳನ್ನು ದುರ್ಬಲ ಎಂದು ಪುರುಷ ತೀರ್ಮಾನಿಸಿದುದು.

★ ಹೆಣ್ಣಿನ ರಕ್ಷಣೆ ಪುರುಷನಿಂದ ಮಾತ್ರ ಸಾಧ್ಯ. ಆಕೆಗೆ ಪುರುಷನೇ ಆಧಾರ ಎಂಬ ನಂಬಿಕೆಗಳು ಬಲವಾದುದು.

★ ಪಿತೃ ಪ್ರಧಾನ ದೈವಗಳು ಪ್ರಧಾನವಾಗಿ ಮಾತೃ ಪ್ರದಾನ ದೈವಗಳು ಅಧಿಕಾರ ಕಳೆದುಕೊಂಡುದುದು.

★ ಹೆಣ್ಣನ್ನು ಆಸ್ತಿ ಎಂದು ತಿಳಿದದ್ದು.

★ ವಾಸಿಸುವ ನೆಲೆ ಗಂಡಿನ ನೆಲೆಗೆ ಸ್ಥಾನಾಂತರವಾದುದ್ದು.

★ ಹೆಣ್ಣಿನ ದೈಹಿಕ ಶಕ್ತಿ ಸಾಮರ್ಥ್ಯಗಳು ಗಂಡಿಸಿನ ಶಕ್ತಿ ಸಾಮರ್ಥ್ಯಗಳ ಮುಂದೆ ದುರ್ಬಲ ಎನಿಸಿದ್ದು.

★ ಎಲ್ಲ ಧರ್ಮಗ್ರಂಥಗಳು ಪುರುಷಾವತಾರಕ್ಕೆ ಪೂರಕವಾಗಿ ರೂಪಗೊಂಡುದ್ದು.

★ ಎಲ್ಲ ನಾಗರೀಕತೆಗಳು ಪುರುಷಾಧಿಪತ್ಯದ ಸಾಮ್ರಾಜ್ಯವನ್ನು ಸ್ಥಾಪಿಸಕೊಂಡದ್ದು.

★ ಸ್ತ್ರೀ ಸಮೂದಾಯವು ತನ್ನ ಪ್ರತಿರೋಧವನ್ನು ತಡೆದುಕೊಂಡದ್ದು.

★ ಸ್ತ್ರೀಯರು ಪುರುಷರ ಜೊತೆ ಮಾಡಿಕೊಂಡ ಏಕಮುಖ ಸಂಧಾನಗಳು.

★ ಸ್ತ್ರೀ ಸಮೂದಾಯದ ಹೊಂದಾಣಿಕೆಯ ಸ್ವಭಾವ.

★ ಹುಟ್ಟಿನಿಂದಲೇ ಹೆಣ್ಣು ಮಕ್ಕಳನ್ನು ನಿಯಂತ್ರಿಸುವ, ರೂಪಿಸುವ, ನಿರ್ದೇಶಿಸುವ, ನಿಯಮಾವಳಿಗಳನ್ನು ಹೇರುವ ಅಧಿಕಾರ ಪುರುಷರಿಗೆ ದಕ್ಕಿದ್ದು.

★ ಹೆಣ್ಣು ತನಗಿಂತ ಕಡಿಮೆ ತಿಳುವಳಿಕೆಯವಳು ಎಂದು ಗಂಡಸು ಪೂರ್ವಾಗ್ರಹಕ್ಕೆ ಒಳಗಾದುದು.

★ ಹೆಣ್ಣಿನ ದೇಹದಲ್ಲಿ ಆಗುತ್ತಿದ್ದ ಬದಲಾವಣೆಗಳು.

★ ಹೆಣ್ಣಿನ ಜವಾಬ್ದಾರಿಗಳನ್ನು ಕೌಟಂಬಿಕ ಚಟುವಟಿಕೆಗಳಿಗೆ ಮಾತ್ರ ಸೀಮಿತಗೊಳಿಸಿ ಗಂಡಸು ಹೆಚ್ಚಿನ ಜವಾಬ್ದಾರಿಗಳನ್ನು ತನ್ನ ಕೈಯಲ್ಲೆ ಇಟ್ಟುಕೊಂಡದ್ದು.

★ ಎಲ್ಲಾ ಆಸ್ತಿಪಾಸ್ತಿಗಳ ಮೇಲೆ ಪುರುಷನೇ ಒಡೆತನ ಕಾಯ್ದುಕೊಂಡದ್ದು.

★ ಪುರುಷನ ಅನುಭೋಗ ಪ್ರವೃತ್ತಿ ಏಕಮುಖವಾಗಿ ವಿಕಾಸವಾದದ್ದು.

★ ಹೆಣ್ಣಿನ ಮೇಲೆ ಮಾತ್ರ ಶೀಲದ ಮಾನದಂಡವನ್ನು ಹೇರಿದ್ದು.

ಹೀಗೆ ಅನೇಕ ಮಜಲುಗಳಿಂದ ಹೇಗೆ ಹೆಣ್ಣ ದೇಹದ ಮೇಲೆ ಪುರುಷಾಧಿಪತ್ಯವು ಪಾರಮ್ಯ ಸಾಧಿಸಿತು ಎಂದು ಗುರುತಿಸಬಹುದು. ಇಂತಹ ಮನೋಭೂಮಿಕೆಗಳಿಂದಲೇ ಮನುಧರ್ಮ ಶಾಸ್ತ್ರದಂತಹ ನಿಷೇಧಾತ್ಮಕ ಸಂಹಿತೆಗಳು ಹೆಣ್ಣಿನ ವಿರುದ್ಧ ಹುಟ್ಟಿಕೊಂಡವು ಈ ಬಗೆಯ ಮೌಲ್ಯಗಳನ್ನು ಪ್ರತಿಪಾದಿಸುವ ರೀತಿಯಲ್ಲೇ ಎಲ್ಲಾ ಧರ್ಮಗಳು ಪುರುಷ ರೂಪಿಯಾದವೆ ಹೊರತು ಯಾವ ಧರ್ಮವೂ ಸ್ತ್ರೀ ಸ್ವರೂಪವನ್ನು ತಮ್ಮ ಕೇಂದ್ರವಾಗಿಸಿಕೊಳ್ಳಲಿಲ್ಲ. ಇಲ್ಲಿನ ಪ್ರತಿಯೊಂದು ಅಂಶವನ್ನು ಗಮನಿಸಿದಾಗಲೂ ಸ್ಪಷ್ಟವಾಗಿ ಕಂಡು ಬರುವ ಅಂಶಗಳು ಈ ಕೆಳಗಿನಂತಿವೆ.

★ ಪುರುಷಾಧಿ ಪತ್ಯವು ಸ್ತ್ರೀ ಸಂಸ್ಕೃತಿಯ ಮೇಲೆ ಯಾಜಮಾನ್ಯವನ್ನು ಸ್ಥಾಪಿಸಿದೆ.

★ ಸ್ತ್ರೀ ದೇಹದ ಮೇಲೆ ಪುರುಷ ತನ್ನ ಲೈಂಗಿಕ ಪಾರಮ್ಯ ಸ್ಥಾಪಿಸುವುದಕ್ಕಾಗಿಯೆ ಧಾರ್ಮಿಕ ಮೌಲ್ಯಗಳನ್ನು ಹೇರಿದ್ದಾನೆ.

★ ಹೆಣ್ಣ ದೇಹದ ಆಕರ್ಷಣೆಯು ನೈಸರ್ಗಿಕವಾಗಿದ್ದರೂ ಆಕೆಯ ಸೃಷ್ಟಿಶೀಲ ಶಕ್ತಿಯನ್ನು ಅಪಮೌಲ್ಯ ಗೊಳಿಸಿ ಹೆಣ್ಣಿನ ಸಾಮರ್ಥ್ಯವನ್ನು ಹೀಗೆಳೆಯಲಾಗಿದೆ.

★ ಪುರುಷ ನಾಗರೀಕತೆಯ ತನಗೆ ಬೇಕಾದ ಸಾಮ್ರಾಜ್ಯಶಾಹಿ ಶಕ್ತಿಗಳನ್ನು ಸ್ಥಾಪಿಸಿಕೊಂಡು ಅದರಲ್ಲಿ ಮಹಿಳೆಯ ದೇಹ ಮತ್ತು ಮನಸ್ಸನ್ನು ನಿರ್ಭಂಧಿಸಿದೆ.

★ ಕೌಟುಂಬಿಕ ಹಕ್ಕನ್ನು ಪುರುಷಾವತಾರಕ್ಕೆ ತಕ್ಕಂತೆ ಮಾರ್ಪಡಿಸಿ ಹೆಣ್ಣನ್ನು ಸಂತಾನಕ್ಕಾಗಿ ಬಳಸಿಕೊಳ್ಳಲಾಗಿದೆ.

★ ಹೆಣ್ಣಿನ ದೇಹವನ್ನು ಬಹಳ ಸೀಮಿತವಾಗಿ ಅರ್ಥೈಸಿ ಕಾಮುಕವಾದ ಮೌಲ್ಯಗಳಿಗೆ ಬೆಲೆ ಕೊಡಲಾಗಿದೆ.

★ ಹೆಣ್ಣಿನ ದೇಹಕ್ಕಿದ್ದ ದೈವಿಕ ನಂಬಿಕೆಯನ್ನು ನಾಶ ಪಡಿಸಿ ಹೆಣ್ಣಿನ ಶೀಲಕ್ಕೆ ಮಾತ್ರ ಹೆಚ್ಚಿನ ಗಮನ ನೀಡಲಾಗಿದೆ.

★ ಸಂಸ್ಕೃತಿಗೂ ಹೆಣ್ಣಿನ ಸೃಷ್ಟಿಶೀಲ ಶೀಲ ಶಕ್ತಿಗೂ ಇದ್ದ ದೈವಿಕ ಸಂಬಂಧವನ್ನು ನಿರುಪಯುಕ್ತಗೊಳಿಸಿ ಧಾರ್ಮಿಕ ಆಚರಣೆಗಳಿಂದ ಸ್ತ್ರೀ ದೇಹದ ಕಾರಣಕ್ಕೆ ನಿಷೇಧಿಸಲಾಗಿದೆ.

★ ಹೆಣ್ಣು ಮತ್ತು ಆಕೆಯ ಸಾಂಸ್ಕೃತಿಕ ನಂಬಿಕೆಗಳ ಮೇಲೆ ಪುರುಷ ದೈವವನ್ನು ಸ್ಥಾಪಿಸಿ ಆಕೆಯ ಅಸ್ಮಿತೆಯನ್ನು ಅಪಮೌಲ್ಯಗೊಳಿಸಲಾಗಿದೆ.

★ ಹೆಣ್ಣಿನ ದೇಹವನ್ನು ಕಾಮಿಸುವ ಮೌಲ್ಯಗಳಿಗೆ ವಿಶೇಷ ಗಮನಕೊಟ್ಟು ಆಕೆಯ ದೇಹದ ಮೇಲೆ ಕ್ರೂರ ಮಾನದಂಡಗಳನ್ನು ಅಳವಡಿಸಲಾಗಿದೆ.

★ ಹೆಣ್ಣಿನ ಬಗೆಗಿದ್ದ ದೈವಾರಾಧನೆಗಳು ಸಂಸ್ಕೃತಿಯ ಪಳೆಯುಳಿಕೆಯಾಗಿ ಹೆಣ್ಣಿನ ದೇಹ ಮಾತ್ರ ಗಂಡಿಸಿಗೆ ಮುಖ್ಯವಾಗಿದೆ.

★ ಹೆಣ್ಣಿನ ಪ್ರತಿರೋಧ ಗುಣವು ತಾಳಿಕೆಯ ಸ್ವಭಾವದ್ದಾಗಿದ್ದು ಗಂಡಿನ ದರ್ಪವನ್ನು ಉದಾರವಾಗಿಯೆ ಸಹಿಸಿಕೊಂಡಿದೆ.

ಇಂತಹ ಹಿನ್ನಲೆಯಿಂದ ಹೆಣ್ಣ ದೇಹದ ಮೇಲಿನ ಅಧಿಕಾರವು ಬೇರೆ ಬೇರೆ ಕಾಲಘಟ್ಟದಲ್ಲಿ ಮತ್ತಷ್ಟು ಉಗ್ರವಾಗುತ್ತಾ ಆಕೆಯ ದೇಹದ ಮೇಲೆ ನೂರಾರು ಬಗೆಯ ಭೋಗಪ್ರಧಾನ ಆಚರಣೆಗಳನ್ನು ಸಂಸ್ಕೃತಿ ಮತ್ತು ಧರ್ಮದ ಚೌಕಟ್ಟಿನಲ್ಲಿ ರೂಪಿಸಿರುವುದನ್ನು ಕಾಣಬಹುದು. ಇದು ಮೇಲೆ ಪ್ರಸ್ತಾಪಿಸಿದ್ದಂತೆ 'ಗಂಡಸಿನ ಸಂಕೀರ್ಣ ಮನಸ್ಥಿತಿ' ಯಾಗಿದ್ದರೂ ಈ ಮನಸ್ಥಿತಿಯ ಹಿನ್ನಲೆಯನ್ನು ಇನ್ನಷ್ಟು ವಿಸ್ತರಿಸಿ ತೆರೆದು ಗಮನಿಸಬಹುದು.

ಗಂಡಸಿನ ಮನಸ್ಸು ಪೂರ್ವಾಗ್ರಹಕ್ಕೆ ಹೆಚ್ಚು ಬದ್ಧವಾದುದೇ ಎಂಬ ಪ್ರಶ್ನೆಯ ಮೂಲಕ ಮೇಲಿನ ಅಂಶವನ್ನು

ಚರ್ಚಿಸಬಹುದು ಸಾಮಾನ್ಯವಾಗಿ ಗಂಡಿನ ಮನಸ್ಸಿನಲ್ಲಿ ಹೆಣ್ಣ ಶೀಲದ ಬಗ್ಗೆ ಬರುವ ಎಲ್ಲಾ ವಿಚಾರಗಳು ಅನುಮಾನ ಮತ್ತು ಸ್ವಕಲ್ಪನೆಗಳ ಮೂಲಕ ಪೂರ್ವಾಗ್ರಹದಿಂದಲೇ ರೂಪಿತವಾಗಿರುತ್ತವೆ ಎಂದು ಊಹಿಸಬಹುದು. ಗಂಡಿನ ಮನಸ್ಸು ಹೆಣ್ಣನ್ನು ಖಾಸಗಿ ಆಸ್ತಿಯಾಗಿ ಭಾವಿಸಿದ್ದರ ಪರಿಣಾಮ ಇದು .ತನ್ನ ಆಸ್ತಿಯನ್ನು ಮತ್ತೊಬ್ಬರು ಅನುಭವಿಸಬಾರದು ಎಂಬ ಮನಸ್ಥಿತಿಯು ಸ್ವಾರ್ಥ ಅಧಿಕಾರದ ಪ್ರತಿಬಿಂಬ.ಇದು ಗಂಡು ಪ್ರಾಣಿಗಳ ಗುಣವು ಹೌದು. ಪ್ರಾಣಿ ಪಕ್ಷಿಗಳ ಮೃಗ ಪ್ರಭುತ್ವದಲ್ಲಿ ಅಂತಿಮವಾಗಿದ್ದು ಅದು ತನಗೆ ಬೇಕಾದ ಎಲ್ಲಾ ಹೆಣ್ಣುಗಳನ್ನು ಅನುಭವಿಸುತ್ತದೆ . ಹೀಗೆಯೆ ಗಂಡಿನ ಸ್ವಭಾವ ಎಂದು ಹೇಳಲಿಕ್ಕೆ ಬರುವುದಿಲ್ಲವಾದರೂ ನಾಗರೀಕರಣದ ಗಂಡಿನ ಮನಸ್ಸಿನಲ್ಲಿ ಹೆಣ್ಣ ಮೇಲಿನ ಅಧಿಕಾರದ ಗುಣವು ಅಂತಹ ಗುಣಕ್ಕೆ ಒಂದಿಷ್ಟು ಹೋಲಬಲ್ಲದು. ತನಗೆ ಮಾತ್ರ ಬದ್ಧಳಾಗಬೇಕು ಅವಳ ದೇಹ ನನಗೆ ಮಾತ್ರ ಸಂಬಂಧ ಪಟ್ಟದ್ದು,ಎಂದು ನಿರ್ಧಿಷ್ಠ ಪಡಿಸುವುದರ ಹಿಂದೆ ಶೀಲದ ನಿಯಮವಿದೆ. ಈ ಶೀಲತತ್ವವಾದರೂ ಹೆಣ್ಣಿನ ಮೇಲಿನ ಅಧಿಕಾರ ಸ್ಥಾಪಿಸುವಂತದ್ದೇ ಆಗಿದ್ದು ಅದು ಪುರುಷನಿಂದಲೆ ಸಾರ್ಥಕ್ಯ ಪಡೆಯಬೇಕು ಎಂಬಲ್ಲಿಗೆ ಬಂದು ನಿಲ್ಲುತ್ತದೆ. ಆದ್ದರಿಂದ ಗಂಡ ಸತ್ತ ನಂತರ ಹೆಣ್ಣಿನ ದೇಹದ ಮೇಲೆ ಹಲವು ನಿಷೇಧಗಳು ಉಂಟಾಗುವುದು. ವಿಧವೆ ಪರಿಕಲ್ಪನೆಯು ಹೆಣ್ಣ ದೇಹದ ಮೇಲಿನ ನಿರ್ಬಂಧವೇ ಹೊರತು ಅದೊಂದು ಧಾರ್ಮಿಕ ಗುಣವಲ್ಲ. ಇನ್ನು ಕ್ರೂರ ಸಂಗತಿ ಎಂದರೆ ಸತಿಸಹಗಮನದಂತಹ ನೀಚ ಕಲ್ಪನೆಯು ಜೀವಂತವಾಗಿ ಹೆಣ್ಣ ದೇಹವನ್ನು ಸುಡುವಂತದಾಗಿದ್ದು. ಅದರ ಮೂಲಕ ಪುರುಷನ ಶೀಲವಂತಿಕೆ ಯಾವ ತರದ್ದು ಎಂಬುದು ತಿಳಿಯುತ್ತದೆ.

ಹೆಣ್ಣಿನ ದೇಹವನ್ನೆ ಧರ್ಮಗಳು ಕೀಳಾಗಿ ಕಂಡಿವೆ. ಈ ಧರ್ಮಗಳಾದರೂ ಪುರುಷರ ಅವತಾರಗಳೆಂದು ಬೇರೆ ಹೇಳಬೇಕಾಗಿಲ್ಲ. ಹೆಣ್ಣಿನ ದೇಹದ ಮೇಲೆ ಹಕ್ಕು ಚಲಾಯಿಸುವ ಪುರುಷ ರೂಡಿ ಆಚರಣೆಗಳ ಪಟ್ಟಿ ಬಹಳ ದೊಡ್ಡದಿದೆ. ಅದನ್ನೆಲ್ಲಾ ಸಂಸ್ಕೃತಿ, ಧರ್ಮ, ಪರಂಪರೆ, ಆಚಾರ ವಿಚಾರಗಳ ಹೆಸರಲ್ಲಿ ಬಲವಾಗಿ ಕಾಯ್ದುಕೊಂಡು ಬರಲಾಗಿದೆ. ಬೆತ್ತಲೆಸೇವೆ, ದೇವದಾಸಿ ಪದ್ಧತಿ, ವೇಶ್ಯಾವಾಟಿಕೆಯಂತಹ ಕ್ರೂರ ಆಚರಣೆಗಳು ಇವತ್ತಿಗೂ ಜೀವಂತವಾಗಿದೆ. ಹೆಣ್ಣ ದೇಹದ ಮಾರಾಟವನ್ನು ಸಂಸ್ಕೃತಿಯ ಗುಣ ಎಂದು ಹೇಳಲಾಗದು. ಮಾತೃ ಕಲ್ಪನೆಯ ಜೊತೆಯಲ್ಲೆ ಗಂಡಸು ವೇಶ್ಯೆಯ ಕಲ್ಪನೆಯನ್ನು ಬೆಳೆಸಿಕೊಂಡು ಬಂದಿರುವುದು ವಿಚಿತ್ರವಾಗಿದೆ. ಗಂಡಸಿನ ಮನಸ್ಸನ್ನು ಸಂಕೀರ್ಣ ಎಂದದ್ದು ಈ ಹಿನ್ನೆಲೆಯಲ್ಲೆ. ಪೂರ್ವಾಗ್ರಹ ಗಂಡಸಿನ ಮನಸ್ಸಿನ ಯಾವತ್ತೂ ಜಾಗೃತವಾಗಿರುತ್ತದೆ ಎಂಬುದಕ್ಕೆ ಗಂಡಸರ ಶೀಲ ಕಲ್ಪನೆಯೆ ದೊಡ್ಡ ಸಾಕ್ಷಿಯಾಗಿದೆ.

ವಾಸ್ತವವಾಗಿ ಗಂಡಸಿನ ಮನಸ್ಸು ಪ್ರಬಲವಾಗಿ ಅಧಿಕಾರ ಬದ್ಧವಾದುದು. ಅಧಿಕಾರ ಮದದ ಮನಸ್ಸು ಸ್ವಾತಂತ್ರ್ಯವನ್ನು ಯಾವತ್ತು ನಿರಾಕರಿಸುವಂತದ್ದು. ಆದ್ದರಿಂದಲೆ ಹೆಣ್ಣಿನ ದೇಹದ ಮೇಲೆ ಸ್ವತಃ ಹೆಣ್ಣಿಗೂ ಸ್ವಾತಂತ್ರ್ಯವಾಗಲಿ ಅಧಿಕಾರವಾಗಲಿ ಇಲ್ಲ. ಹೆಣ್ಣಿನ ಇಡೀ ವ್ಯಕ್ತಿತ್ವವನ್ನೇ ನಿಯಂತ್ರಿಸಲು ಈ ಬಗೆಯಲ್ಲಿ ಆಕೆಯ ದೇಹದ ಮೇಲೆ ಪ್ರಭುತ್ವ ಸ್ಥಾಪಿಸಲಾಗಿದೆ. ಇಂತಹ ಗಂಡಸಿನ ಮನಸ್ಸಿಗೆ ಮನು ಧರ್ಮಶಾಸ್ತ್ರದ ಸಂಹಿತೆಗಳು ಒಳ್ಳೆಯ ಉದಾಹರಣೆ. ಈ ಬಗೆಯ ಧೋರಣೆ ಸ್ತ್ರೀ ಸಮುದಾಯದ ಮನಸ್ಸನ್ನೆ ಆಳುವಂತಿದ್ದು ಆಕೆಯ ಸಹಜ ವಿಕಾಸದ ಕ್ರಮಕ್ಕೇ ದೊಡ್ಡ ತಡೆಯನ್ನು ಗಂಡಸಿನ ಮನಸ್ಸು ರೂಪಿಸಿದೆ. ಗಂಡಸಿನ ಮನಸ್ಸು ಲಿಂಗಬೇದ

ತಾರತಮ್ಯವನ್ನು ಬೆಳೆಸುವಲ್ಲಿ ಕ್ರೂರ ಪಾತ್ರವನ್ನು ವಹಿಸಿದೆ. ಕೆಳಜಾತಿ ಹೆಣ್ಣುಗಳ ದೇಹದ ಮೇಲೆ ಆಚರಣೆಗಳ ಸಂದರ್ಭದಲ್ಲಂತು ಪುರುಷರ 'ಫ್ಯಾಸಿಸ್ಟ್ ಮೈಂಡ್' ಅತ್ಯಂತ ಹೇಯವಾಗಿ ವರ್ತಿಸಿದೆ. ಬೆತ್ತಲೆ ಪೂಜೆಯು ಇದರಿಂದಾಗಿಯೆ ಮೇಲುಜಾತಿ ಪುರುಷರ ವಿಕೃತ ಮನಸ್ಸಿಗೆ ಹಿಡಿದ ಕನ್ನಡಿಯಂತಿರುವುದು.

ಗಂಡಸಿನ ಮನಸ್ಸು ಹೆಣ್ಣಿನ ದೇಹದ ಮೇಲೆ ಎಷ್ಟೊಂದು ನಿಯಂತ್ರಣ ಸಾಧಿಸಿದೆಯೋ ಅದರಷ್ಟೇ ಪ್ರಮಾಣದಲ್ಲಿ ಸ್ತ್ರೀಯ ಮನಸ್ಸಿನ ಮೇಲೂ ದಿಗ್ವಿಜಯ ಸಾಧಿಸಿದೆ. ಇಂತಹ ಹಿನ್ನೆಲೆಯುಳ್ಳ ಪುರುಷ ಚಿತ್ತವು ಪೂರ್ವಾಗ್ರಹದಿಂದಲೇ ಹೆಣ್ಣಿನ ಮೇಲೆ ಹಕ್ಕು ಚಲಾಯಿಸಿದೆ. ಇದು ಕೇವಲ ಸ್ತ್ರೀ ಯರಿಗೆ ಆಗುವ ಅನ್ಯಾಯವಾಗಿರದೆ ಅದು ಒಟ್ಟು ಮಾನವ ಕುಲದ ಭವಿಷ್ಯದ ಮೇಲೆಯೇ ಅಪಾಯನ್ನುಂಟು ಮಾಡುವಂತದ್ದು. ಹೆಣ್ಣಿನ ಮನಸ್ಸು ಚಂಚಲ ಎಂದು ಕರೆವ ಗಂಡಿನ ಮನಸ್ಸೇ ಅತ್ಯಂತ ಪೂರ್ವಾಗ್ರಹ ಪೀಡಿತವಾದುದಾಗಿದ್ದು ಸಂಸ್ಕೃತಿ ಮತ್ತು ಧರ್ಮಗಳ ಎರಡೂ ಶೂಲಗಳಿಂದ ಹೆಣ್ಣಿನ ಮನಸ್ಸಿನ ಮೇಲೆ ಪ್ರತಿ ಕಾಲಘಟ್ಟದಲ್ಲೂ ಇರಿಯುತ್ತ ಬಂದಿರುವುದನ್ನು ಗಮನಿಸಬಹುದು. ಅದರ ಪರಿಣಾಮವೇ ಇಂದು ಸ್ತ್ರೀ ಯರು ಅನೇಕ ಬಗೆಯಲ್ಲಿ ಪುರುಷಶಾಹಿಯ ಹಿಡಿತದಿಂದ ಬಿಡಿಸಿಕೊಳ್ಳಲು ಆಗದಿರುವುದು. ಪುರುಷ ಮನಸ್ಸು ಭಾಗಶಃ ಸಂಸ್ಕೃತಿಯ ಸ್ವಭಾವಕ್ಕೆ ನಿಷ್ಠವಾಗಿರಲಾರದು. ಅದು ಧರ್ಮಕ್ಕೆ ಹೆಚ್ಚು ಬದ್ದವಾಗಿರುತ್ತಲೆ ಸ್ತ್ರೀ ಯರನ್ನು ಧರ್ಮದ ಬಲಿಪೀಠಕ್ಕೆ ಕಟ್ಟಿಬಿಡುತ್ತದೆ. ಪರಶುರಾಮನಂತಹ ಮಾತೃ ಹಂತಕನನ್ನು ಪುರುಷ ನಿರ್ಮಿಸಿಕೊಳ್ಳುವುದು ಇದರಿಂದಲೆ ಬಹಳ ಸುಲಭ. ಮಾತೃ ಹತ್ಯೆ ಮಹಾಪಾಪ ಎಂದು ಹೇಳುವಲ್ಲಿಯೇ ಮಾತೃ ಹತ್ಯೆಯ ಅನೇಕ ಹಂತಗಳಲ್ಲಿ ಪುರುಷ ಸಮಾಜವು ಜಾಣತನದ ಕುರುಡು ಪ್ರದರ್ಶಿಸುವುದು ಮನುಷ್ಯತ್ವವಲ್ಲ. ಸತಿಸಹಗಮನದಂತಹ ಆಶಯಗಳು ಸಂಸ್ಕೃತಿಯಲ್ಲಿ ಹೇರಳವಾಗಿ ತುಂಬಿವೆ. ಅಂತಹ ಅಂಶಗಳು ಮತ್ತೆ ಮತ್ತೆ ಹೆಣ್ಣ ದೇಹ ಮತ್ತು ಮನಸ್ಸಿನ ಮೇಲಿನ ದಿಗ್ವಿಜಯದ ರೂಪಕಗಳೇ ಆಗಿವೆ.

ಹೀಗಾಗಿ ಭಾರತೀಯ ಪುರುಷ ವ್ಯವಸ್ಥೆಯಲ್ಲಿ ಹೆಣ್ಣಿನ ಮೇಲೆ ಮಾನಸಿಕ ಹಲ್ಲೆಗಳು ನಿತ್ಯವೂ ಘಟಿಸುತ್ತಿರುತ್ತವೆ. ದೇಹ ಮತ್ತು ಮನಸ್ಸಿನ ಮೇಲಿನ ಪುರುಷ ಬರೆಗಳು ಅಳಿಸಲಾಗದವು. ಈ ಬರೆಗಳ ಹಿಂಸೆಯಲ್ಲೇ ಬೆಳೆದು ಬಂದ 'ಭಾರತೀಯ ನಾರಿ'ಯರ ಅಧೋಲೋಕವು ಹೊರಜಗತ್ತಿಗೆ ಕಾಣಿಸಲಾರದು. ಈ ಅಧೋಲೋಕದ ಮಾಲೀಕ ಪುರುಷನೊ ಎಂಬುದು ಇಲ್ಲಿನ ವಿಷಾದ. ಇಂತಹ ಸ್ಥಿತಿಯಲ್ಲೂ ಹೆಣ್ಣು ತನ್ನ ಅಸ್ಮಿತೆಯನ್ನು ಉಳಿಸಿಕೊಳ್ಳಲು ಅವಳಿಗೇ ತಿಳಿಯುವ ಕೆಲವು ಉಪಾಯಗಳನ್ನು ಕೂಡ ಮಾಡಿಕೊಂಡು ಬಂದಿದ್ದಾಳೆ. ಮುಂದಿನ ಹಂತದಲ್ಲಿ ಅವನ್ನು ಚರ್ಚಿಸಬಹುದು. ಇಲ್ಲಿ ಮುಖ್ಯವಾಗಿ ಹೇಗೆ ಸಂಸ್ಕೃತಿ ಹೆಸರಿನಲ್ಲಿ ದೇಹವನ್ನು ಆಳೆಯಲಾಗಿದೆ ಎಂಬುದನ್ನು ಈ ಕೆಳಗಿನಂತೆ ಗಮನಿಸಬಹುದು.

★ ಹೆಣ್ಣಿನ ದೇಹ ಪವಿತ್ರ ಅಲ್ಲ, ಅದು ಹೊಲಸಿನ ನೆಲೆ. ಆಕೆಯ ದೇಹ ಅಶುದ್ಧವಾದುದು

★ ಹೆಣ್ಣಿನ ಮೋಹಕ ಗುಣವು ಮುಕ್ತಿಗೆ ತೊಡಕಾದುದು

★ ಹೆಣ್ಣು ಮುಕ್ತಿಗೆ ಅರ್ಹಳಲ್ಲ, ದೈವತ್ವದ ಪಯಣದಲ್ಲಿ ಆಕೆಗೆ ಮಹತ್ವ ನೀಡಬಾರದು.

★ ಹೆಣ್ಣು ಕಾಮನೆಯ ಆಸೆ ಹುಟ್ಟಿಸುವ ನೆಲೆ. ಆದರಿಂದಲೇ ಗಂಡಸು ನೀತಿಗೆಡುವುದು.

★ ಹೆಣ್ಣು ಸ್ವಾತಂತ್ರ್ಯಕ್ಕೆ ಅರ್ಹಳಲ್ಲ. ಆಕೆಗೆ ಸ್ವಾತಂತ್ರ್ಯ ಕೊಟ್ಟರೆ ಅವಳು ಅದನ್ನು ದುರುಪಯೋಗ ಪಡಿಸಿಕೊಳ್ಳುವಳು.

★ ಹೆಣ್ಣಿನ ಮನಸ್ಸು ಮತ್ತು ದೇಹ ಎರಡೂ ಚಂಚಲ ಸ್ವಭಾವದವು.

ಇಂತಹ ನಂಬಿಕೆಗಳು ಈಗಲೂ ಗಂಡಸಿನ ಮನಸ್ಸಿನಲ್ಲಿ ಪ್ರಬಲವಾಗಿ ಚಾಲ್ತಿಯಲ್ಲಿವೆ. ಸಂಸ್ಕೃತಿಯ ನಿಜವಾದ ಮೌಲ್ಯಕ್ಕೆ ಈ ನಿಲುವುಗಳು ಘನತೆ ತರುವಂತವಲ್ಲ. ಸಂಸ್ಕೃತಿಯ ಹೆಸರಲ್ಲಿ ಹೆಣ್ಣ ದೇಹ ಮತ್ತು ಮನಸ್ಸಿನ ಮೇಲೆ ಅತ್ಯಾಚಾರ ಎಸಗಿದಂತಿವೆ. ಗಂಡಸಿನ ಮೌಲ್ಯಗಳು ಪಿತೃ ಪ್ರಧಾನ ವ್ಯವಸ್ಥೆಯು ಮಾತೃ ಪ್ರಧಾನ ಸಂಸ್ಕೃತಿ ನಿಷ್ಠ ಮೌಲ್ಯಗಳನ್ನು ನಾಶಪಡಿಸಿ ಅದರ ಮೇಲೆ ಧರ್ಮ ಪ್ರಭುತ್ವದ ಪುರುಷಾಧಿಪತ್ಯದ ನಿಷೇಧಾತ್ಮಕ ನಿಯಮಗಳನ್ನು ಹೇರಿದ್ದರಿಂದ ಸ್ತ್ರೀಯರು ತಮ್ಮ ನಿಜವಾದ ನೈಸರ್ಗಿಕ ಶಕ್ತಿಯ ಸಾಂಸ್ಕೃತಿಕ ಮೌಲ್ಯಗಳನ್ನು ಕಳೆದುಕೊಳ್ಳ ಬೇಕಾಯಿತು. ಈ ಅಭಿಪ್ರಾಯವನ್ನೇ ಬಿಡಿಸಿ ಇನ್ನಷ್ಟು ಬಿಡಿಸಿ ನೋಡುವ.

ಮಾತೃ ಪ್ರಧಾನ ಸಮಾಜವು ಸಂಸ್ಕೃತಿ ನಿಷ್ಠವಾಗಿತ್ತು. ಅದಕ್ಕೆ ಬುನಾದಿಯಾಗಿದ್ದುದು ನಿಸರ್ಗ ಪ್ರಕೃತಿಯ ಅನುಭವ ಮತ್ತು ಅರಿವು ಸ್ತ್ರೀಯರ ಸಂಸ್ಕೃತಿಯಲ್ಲಿ ಹೇರಳವಾಗಿದ್ದವು. ಹಾಗಾಗಿ ಅವರ ಸಂಸ್ಕೃತಿಯು ಸೃಷ್ಟಿಶೀಲವಾಗಿತ್ತು. ಅದು ಭೋಗ ನೀತಿಗೆ ಬದ್ಧವಾಗಿರಲಿಲ್ಲ, ಪೊರೆವ, ಹಡೆವ, ಕಾಯುವ ಗುಣಗಳನ್ನೇ ಪ್ರಧಾನವಾಗಿ ಅನುಸರಿಸಿದ ಸ್ತ್ರೀ ಸಂಸ್ಕೃತಿಯು ಆಸ್ತಿ ಭಾವನೆಯಲ್ಲಿ ಖಾಸಗೀ ನೀತಿಯಲ್ಲಿ ಏನನ್ನೂ ಮಾಡದೆ ಎಲ್ಲವನ್ನು ನಿಸರ್ಗದ ಸಾವಯವ ಸಂಬಂಧದಂತೆ ಅಖಂಡವಾಗಿ ಭಾವಿಸಿತ್ತು. ಇದು ನಿಜವಾದ ಸಂಸ್ಕೃತಿಯ ರೀತಿ. ಇಂತಲ್ಲಿ ಯಾರೂ ನಾಯಕರಲ್ಲ ಒಡೆತನದ ಪ್ರಶ್ನೆಯೆ ಇಲ್ಲ. ಖಾಸಗೀ ಆಸ್ತಿಯ ಗುಣವೇ ಇಲ್ಲ. ಸಮಷ್ಟಿ ಸ್ವಭಾವ ಸಂಯುಕ್ತ ತತ್ವ, ಒಟ್ಟಾಗಿ ಬೆರೆವ ನೀತಿ ಗುಂಪಾಗಿ ಬಾಳುವ ರೀತಿ ಮುಖ್ಯವಾಗಿದ್ದುದನ್ನು ಸ್ತ್ರೀ ಯರ ಸಂಸ್ಕೃತಿಯ ಪಳೆಯುಳಿಕೆಗಳಿಂದ ತಿಳಿಯಬಹುದು. ಸಂಸ್ಕೃತಿಯಲ್ಲಿ ಅಧಿಕಾರದ ವ್ಯವಸ್ಥೆ ಇರುವುದಿಲ್ಲ, ಬದಲಿಗೆ ಸಮಷ್ಟಿ ಜೀವನ ತತ್ವ ಇರುತ್ತದೆ. ಮಾನವ ಕುಲಗಳ ಆದಿಮ ಹಂತವನ್ನು ಅಧ್ಯಯನ ಮಾಡಿದ ಎಲ್ಲ ವಿದ್ವಾಂಸರು ಈ ಬಗೆಯ ನಂಬಿಕೆಯನ್ನು ಪ್ರತಿಪಾದಿಸಿದವರೇ ಆಗಿದ್ದಾರೆ.

ಇಂತಹ ಹಿನ್ನೆಲೆಗಳಲ್ಲಿ ಹೆಣ್ಣಿನ ಪ್ರತಿಕ್ರಿಯೆಯನ್ನು ಮುಖ್ಯವಾಗಿ ಪರಿಗಣಿಸಬೇಕು. ಪುರುಷಾಧಿ ಪತ್ಯದ ಎದಿರು ಯಾಕೆ ಆಕೆ ಸೌಮ್ಯಳಾದಳು? ಅವಳಿಗಿದ್ದ ಆಯ್ಕೆಗಳೇನು? ಆಕೆಯ ಸ್ವಭಾವದ ಹಿನ್ನೆಲೆ ಏನು? ಹಿಂಸೆಯನ್ನು ಸಹಿಸಿಕೊಂಡ ಆಕೆಯ ರೀತಿಯನ್ನು ಹೇಗೆ ಅರ್ಥೈಸುವುದು? ಇಂತಹ ವೇಳೆಯಲ್ಲಿ ಆಕೆ ಕೈಗೊಂಡ ಉಪಾಯಗಳೇನು? ಆಕೆ ಪುರುಷ ವ್ಯವಸ್ಥೆಯ ಜೊತೆ ಮಾಡಿಕೊಂಡ ಒಪ್ಪಂದಗಳೇನು? ಈ ಸ್ಥಿತಿಯಲ್ಲಿ ಸಂಸ್ಕೃತಿ ಮತ್ತು ಧರ್ಮದ ನಡುವೆ ಮಹಿಳೆ ತನ್ನ ರೂಪವನ್ನು ಕಾಣಿಸಿಕೊಂಡ ಬಗೆ ಯಾವುದು? ಆಕೆಯ ಪ್ರತಿಭಟನೆಯ ಸ್ವರೂಪ ಯಾವುದಾಗಿತ್ತು? ಆಕೆ ತನ್ನ ದೇಹದ ಮೇಲಿನ ಹಲ್ಲೆಗೆ ಪ್ರತಿಯಾಗಿ ಯಾವ ಕ್ರಮ ಕೈಗೊಂಡಳು? ಇಂತಹ ಪ್ರಾಥಮಿಕ ಪ್ರಶ್ನೆಗಳಿಗೆ ತಕ್ಕ ಉತ್ತರಗಳನ್ನು ಕಂಡುಕೊಳ್ಳಬೇಕಾದುದಿದೆ. ಸಂಸ್ಕೃತಿಯ ಆವರಣದಲ್ಲಿ ಸೂಕ್ತ

ಉತ್ತರ ಸಿಗಲು ಸಾಧ್ಯವಿದೆ. ಜನಪದ ಆಚರಣೆಗಳಲ್ಲಿ ಆಕೆಯ ಮೌಖಿಕ ಪರಂಪರೆಯಲ್ಲಿ ಸಂಸ್ಕೃತಿಯ ಅನೇಕ ರೀತಿ ನೀತಿಗಳಲ್ಲಿ ಅಂತಹ ಸಂಗತಿಗಳನ್ನು ಹುಡುಕಿಕೊಳ್ಳಬಹುದು.

ಒಟ್ಟಿನಲ್ಲಿ ದೇಹವೆ ದೇಗುಲ ಎಂದ ಬಸವಣ್ಣನ ಕಲ್ಪನೆಯೇ ಬೇರೆ. ಬಾಹುಬಲಿಯ ವಿರಾಟ್ ಬೆತ್ತಲೆಯ ರೂಪವೇ ಬೇರೆ. ಜೈನ ದಿಗಂಬರರ ದೇಹಾರ್ಥವೆ ಬೇರೆ. 'ಬೆತ್ತಲಾಗದೆ ಬಯಲು ಸಿಕ್ಕದಲ್ಲಾ' ಎಂದ ಕವಿ ಅಡಿಗರ ನುಡಿಯ ಅರ್ಥವೇ ಬೇರೆ. ಆದಿಮ ಕಾಲದ ಬೆತ್ತಲೆ ಆಚರಣೆಗಳ ಸಾಂಸ್ಕೃತಿಕ ಸ್ವಭಾವವೇ ಬೇರೊಂದು ಲೋಕ. ಆದಿಮ ಹಂತದಲ್ಲಿ ಬೆತ್ತಲೆಯು ಒಂದು ನೈಸರ್ಗಿಕ ಸ್ಥಿತಿಯಾಗಿತ್ತು. ಅದರಲ್ಲೂ ಹೆಣ್ಣಿನ ಬೆತ್ತಲೆ ಹಾಗೂ ಆಕೆಯ ದೇಹವು ಫಲವತ್ತತೆಯ, ಸಮೃದ್ಧಿಯ, , ಸೃಷ್ಟಿಶೀಲತೆಯ ರೂಪಕವಾಗಿತ್ತು. ಅಂತಹ ಬೆತ್ತಲೆಗೆ ನಿಸರ್ಗದ ಅನುಭಾವವಿತ್ತು. ಅದು ದೇಹವನ್ನೇ ದೈವವಾಗಿ ಕಾಣುವ ರೀತಿಯಾಗಿತ್ತು. ಸತಿ ಅನುಸೂಯ ತ್ರಿಮೂರ್ತಿಗಳನ್ನು ಮಕ್ಕಳನ್ನಾಗಿಸಿ ತಾನು ಬೆತ್ತಲೆಯಾಗಿ ಹಾಲೂಡಿಸಿದ್ದು ವಿಶೇಷ. ಆದರೂ ಇಲ್ಲಿ ಕೂಡ ಪುರುಷ ಶ್ರೇಷ್ಠರು ಸತಿ ಅತಿಸೂಯಳ ಶೀಲ, ಪಾವಿತ್ರ್ಯಗಳನ್ನು ಪರೀಕ್ಷಿಸುವ ಆಟವನ್ನು ಆಡ್ಡಿದ್ದಾರೆಂಬುದನ್ನು ಮರೆಯುವಂತಿಲ್ಲ. ಬೆತ್ತಲಾಗಿದ್ದ ಮಾನವ ಬೆತ್ತಲೆಯಿಂದ ದೂರ ಸಾಗಿ ಮೈಮುಚ್ಚಿಕೊಳ್ಳಲು ಮಾಡಿದ ಯತ್ನವೆ ಸಂಸ್ಕೃತಿಯ ನಾಗರೀಕತೆಯ ವಿಕಾಸ. ಆದರೆ ಅದೇ ಮಾನವ ಹೆಣ್ಣನ್ನು ಮಾತ್ರ ಮತ್ತೆ ಮತ್ತೆ ಬೆತ್ತಲೆಗೊಳಿಸುತ್ತ ಸಂಸ್ಕೃತಿ ಮತ್ತು ಧರ್ಮಗಳೆರಡನ್ನು ಅದಕ್ಕಾಗಿ ಬಳಸಿಕೊಂಡದ್ದು ಪುರುಷ ವಿಪರ್ಯಾಸವೇ ಸರಿ.

ಮೇಲೆ ಪ್ರಸ್ತಾಪಿಸಿದ ಪ್ರಶ್ನೆಗಳ ಹಿನ್ನೆಲೆಯಲ್ಲಿ ಹೇಗೆ ಸಂಸ್ಕೃತಿಯ ಒಳಸುಳಿಗಳಲ್ಲಿ ಹೆಣ್ಣಿನ ದೇಹ ಮತ್ತು ಮನಸ್ಸು ಕರಗಿಹೋಗಿ ಪುರುಷನ ನೆರಳಲ್ಲಿ ಉಳಿದುಕೊಂಡಿದೆ ಎಂಬುದನ್ನು ಈ ಮುಂದಿನ ಅಧ್ಯಾಯದಲ್ಲಿ ಪರಿಶೀಲಿಸುವ.

# ಹೆಣ್ಣ ದೇಹ ಮತ್ತು ಲಿಂಗ ತಾರತಮ್ಯ

ಹೆಣ್ಣನ್ನು 'ಮಾಯೆ' ಎಂದು ಕರೆಯುವುದಿದೆ. ಆದರಿಂದಲೆ ಆಕೆಗೆ 'ಮಾಯಾಕಾತಿ', 'ಮಾಟಗಾತಿ' ಎನ್ನುವ ನಕಾರಾತ್ಮಕ ಬಿರುದುಗಳನ್ನು ನೀಡಲಾಗಿದೆ. ಆಕೆ ತನ್ನ ದೇಹ ಮತ್ತು ಮನಸ್ಸಿನ ಮೂಲಕ ವಂಚಿಸುವಳು ಎಂಬ ಗಂಡಿನ ಪ್ರಜ್ಞೆಯಲ್ಲಿ ಬೆಳೆದು ಈ ಬಗೆಯ ವಿಶೇಷಣಗಳನ್ನು ಪೋಷಿಸುತ್ತ ಬರಲಾಗಿದೆ. ಹೆಣ್ಣಿನ ದೇಹದ ಬಗ್ಗೆ ವಿಶ್ವಾಸ ಕಳೆದುಕೊಂಡ ನಂತರಕ್ಕೆ ಪುರುಷ ಮನಸ್ಸು ಆಕೆಯನ್ನು ಲಿಂಗ ತಾರತಮ್ಯದ ಬಲೆಗೆ ಕೆಡವಿದೆ. ನಿಸರ್ಗದ ವಿಕಾಸದ ಭಾಗವಾಗಿಯೇ ಬೆಳೆದು ಬಂದ ಮನುಷ್ಯರ ಜೈವಿಕ ರಚನೆಯು ಯಾವುದೇ ತಾರತಮ್ಯದಿಂದ ವಿಕಾಸವಾಗಲಿಲ್ಲ. ಸೃಷ್ಟಿಗೆ ಬೇಕಾದ ಕ್ರಮದಲ್ಲಿ ಹೆಣ್ಣು ಗಂಡಿನ ದೈಹಿಕ ರಚನೆ ಆಗಿದೆ. ನಿಸರ್ಗದ ನಿಯಮಗಳೇ ಇಲ್ಲಿ ಅಂತಿಮ. ಮನುಷ್ಯ ಅಥವಾ ದೇವರ ಪ್ರಯತ್ನ ಪವಾಡ ಇಲ್ಲಿ ಅಂತಿಮವಾಗಿ ಇರುವುದಿಲ್ಲ. ಪುರುಷ ಪ್ರಧಾನ ವ್ಯವಸ್ಥೆಯು ಬೀಜ ಪ್ರಜ್ಞೆಯನ್ನು ತಲೆಯಲ್ಲಿ ತುಂಬಿಕೊಂಡಿತು. ಆದ್ದರಿಂದಾಗಿಯೇ ಗಂಡಸಿನ ದೇಹ ರಚನೆಯು ಹೆಣ್ಣಿನ ದೇಹಕ್ಕಿಂತ ಶ್ರೇಷ್ಠ ಹಾಗೂ ಸಮರ್ಥ ಭಾವಿಸಿತು. ಮಾಟವಾದ ಹೆಣ್ಣ ದೇಹಕ್ಕಿಂತ ಶೌರ್ಯ ಸಾಹಸಗಳ ಗಂಡು ದೇಹವೇ ಸೃಷ್ಟಿಗೆ ಮೂಲ ಎಂದು ತಿಳಿದಿದ್ದರಿಂದ ಹೆಣ್ಣಿನ ದೇಹವನ್ನು ಕಡೆಗಣಿಸಿತು. ತನ್ನ ಅನುಭೋಗಕ್ಕೆ ಹೆಣ್ಣ ದೇಹವಿದ್ದು ತನ್ನ ಸಂಪರ್ಕದಿಂದಲೇ ಅದಕ್ಕೆ ಮುಕ್ತಿ ಎಂಬ ಅಹಂ ನಿಷ್ಠೆ ನಿಲುವು ಭದ್ರವಾಯಿತು.

ಕಾಲ ಕಳೆದಂತೆಲ್ಲ ಅಂದರೆ ಪಿತೃಪ್ರಧಾನ ಕೌಟುಂಬಿಕ ನೆಲೆ ಪುರುಷಾಧಿಪತ್ಯದಿಂದ ದಿಗ್ವಿಜಯ ಸಾಧಿಸಿದ ನಂತರಕ್ಕೆ ಲಿಂಗ ತಾರತಮ್ಯ ಭಾವನೆಯು ಕ್ರೂರವಾಗಿ ಎಲ್ಲಾ ಹಂತಗಳಲ್ಲು ವ್ಯಾಪಿಸಿತು. ಹೆಣ್ಣಿನ ಸಾಮರ್ಥ್ಯ ಗಳನ್ನೆಲ್ಲಾ ಉಪೇಕ್ಷಿಸುವ ಭಾವನೆ ಪುರುಷ ಸಮಾಜಕ್ಕೆ ಸಾಮಾನ್ಯವಾಯಿತು. ಈ ಬಗೆಯ ಉಪೇಕ್ಷಾ ಭಾವನೆಯ ಮನಸ್ಥಿತಿಯನ್ನು ಅರಿಯುವುದು ಇಂದಿನ ಸಮಾಜದಲ್ಲಿ ಬಹಳ ಮುಖ್ಯವಾಗಿದೆ. 'ಉಪೇಕ್ಷೆ'ಯ ಧೋರಣೆಯೇ ಗರ್ವದ್ದು, ಮೇಲರಿಮೆಯದು. ತನ್ನ ಅಸ್ತಿತ್ವವನ್ನು ಮಾತ್ರ ಸ್ಥಾಪಿಸುವಂತದ್ದು, ಮತ್ತೊಬ್ಬರ ಮಹತ್ವವನ್ನು ನಿರಾಕರಿಸುವಂತದ್ದು. ಎಲ್ಲ ಬಗೆಯ ಉಪೇಕ್ಷೆಗಳಲ್ಲು ಸಹ ಮಾನವರ ಉಪೇಕ್ಷೆ ಅತ್ಯಂತ ಅಪಾಯಕಾರಿಯಾದುದು. ಅದರಲ್ಲು ಹೆಣ್ಣ ಮೆಲಿನ ಉಪೇಕ್ಷೆಯು ಹೇಯವಾದುದು. ಆಕೆ ಕೆಳಗಿನವಳು, ನಾನು ಮೇಲಿನವನು' ಹೆಂಗಸಿನ ಬುದ್ಧಿ ಮೊಣಕಾಲ ಕೆಳಗೆ', 'ಒಲಿದರೆ ನಾರಿ, ಮುನಿದರೆ ಮಾರಿ' ಎಂಬ ನುಡಿಗಟ್ಟುಗಳು ತಾರತಮ್ಯದ ಮೂಲಕ ಸೃಷ್ಟಿಯಾದಂತಹವು. ಆಕೆಯ ವ್ಯಕ್ತಿತ್ವನ್ನೇ ಪೂರ ಅಲ್ಲಗಳೆಯುವ ಅದೆಷ್ಟೋ ನಂಬಿಕೆ, ಆಚಾರ, ವಿಚಾರ ಕಾಯ್ದೆ ಕಟ್ಟಳೆಗಳು ನಿಷೇಧಗಳು ಧರ್ಮ ಮತ್ತು ಸಂಸ್ಕೃತಿಯ ಅಂಗಲಂಗುಲದಲ್ಲು ಹಬ್ಬಿವೆ.

ಆದರೆ ಹೆಣ್ಣಿನ ಭಾವನೆಗಳಲ್ಲಿ ದೇಹದ ಬಗ್ಗೆ ಇರುವ ಭಾವನಾತ್ಮಕ ಹಾಗೂ ಅನುಭಾವಿಕ ಅರ್ಥಗಳು ವಿಭಿನ್ನವಾಗಿವೆ. ಅಕ್ಕಮಹಾದೇವಿಯು ತನ್ನ ದೇಹವನ್ನೇ ಚನ್ನಮಲ್ಲಿಕಾರ್ಜುನನ ದಿವ್ಯವಾದ ಧ್ಯಾನದಲ್ಲಿ ಬೆತ್ತಲೆ ಮಾಡಿಕೊಂಡಳು. ಪುರುಷನ ಕಾಮ ಕಣ್ಣುಗಳಲ್ಲಿರುವ ಕುರುಡುತನಕ್ಕೆ ಆಕೆಯ ಪ್ರತಿಭಟನೆ ಅತ್ಯಂತ ಸೂಕ್ಷ್ಮವಾದದ್ದು. ದೇಹದ ಭೌತಿಕ ಸ್ವರೂಪವನ್ನೇ ಅಲ್ಲಗಳೆಯುವಂತೆ ಅಕ್ಕ ಮಹಾದೇವಿಯು ಸಜ್ಜನರ ದುಷ್ಟ

ಕಂಗಳನ್ನು ಪ್ರಶ್ನಿಸಿದಳು. 'ಬೆತ್ತಲೆ' ದೇಹ ಮಾನಕ್ಕೆ ಸಂಬಂಧಪಟ್ಟದ್ದು ಎಂದು ಆಕೆ ಭಾವಿಸಲಿಲ್ಲ. ಹೆಣ್ಣನ್ನು ಬೆತ್ತಲೆ ಮಾಡುವ ಹಾಗೆಯೆ ಆಕೆಯನ್ನು ಬಂಧಿಸಿ ವೇಷಭೂಷಣ ಆಭರಣ ಮುಂತಾದವುಗಳಿಂದ ಮುಚ್ಚಿಡುವ ಎರಡೂ ಕ್ರಿಯೆಗಳನ್ನು ಪುರುಷನೇ ಮಾಡುವುದು. ಸುಸ್ಥಿತಿ ಮತ್ತು ಆಚರಣೆಗಳ ವೇಳೆಯಲ್ಲಿ ಸ್ವತಃ ಮಹಿಳೆಯೇ ಬೆತ್ತಲಾಗುವ ಹಾಗೂ ಮುಚ್ಚಿಕೊಳ್ಳುವ ಕ್ರಿಯೆಗಳನ್ನು ಆಕೆಯೆ ಮಾಡುವ ಕ್ರಮ ಬೇರೆಯೆ ಇದೆ. ಹೆಣ್ಣಿನ ಮಸ್ಸಿನಲ್ಲಿ 'ದೇಹ' ಎಂದರೆ ಪ್ರಾಣಕ್ಕೆ ಸಮನಾದುದು. ಮಾನ ಅಭಿಮಾನಕ್ಕೆ ಪ್ರತೀಕವಾದದ್ದು, ಪ್ರೀತಿ ಪ್ರೇಮ ಮೋಹಕ್ಕೆ ಅರ್ಪಿಸಿಕೊಳ್ಳುವ ಅತ್ಯಮೂಲ್ಯವಾದ ಭಾವಕೋಶ. ಅಮರವಾದ ತ್ಯಾಗಕ್ಕೆ ಒಪ್ಪಿಸಿಕೊಳ್ಳುವ ಆಕೆಯ ಇಚ್ಛಾಶಕ್ತಿಯ ಧ್ಯೋತಕವಾಗಿ ದೇಹದ ಅರ್ಥ ವಿಶಾಲವಾಗುತ್ತದೆ. ಪೊರೆವ, ಹಡೆವ, ಸಲಹುವ ಕಾಯಕ್ಕೆ ಸಂಕೇತವಾಗಿ ಹೆಣ್ಣ ದೇಹವನ್ನು ಅರ್ಥೈಸಬಹುದು. ಉರಿವ ದೀಪಕ್ಕೆ ಹೆಣ್ಣನ್ನು ಹೋಲಿಸುವುದು ಇದರಿಂದಲೇ. ಮಹಾಮಾತೆ, ಮಹಾಕಾಳಿ, ಆದಿಶಕ್ತಿ ಎಂಬ ಸಕಾರಾತ್ಮಕ ರೂಪಕಗಳು ಬಂದದ್ದು ಇಂತಹ ಹಿನ್ನೆಲೆಗಳಿಂದಲೆ. ಸೃಷ್ಟಿಯ ಸಂಕೇತ ಹೆಣ್ಣಿನ ದೇಹ. ಪುರುಷನಿಗೆ ಆತ್ಮವೇ ಮುಖ್ಯವಾಗಿ ದೇಹ ಕೃತಕ ಕ್ಷಣಿಕ ಎನಿಸಿದರೆ ಹೆಣ್ಣಿಗೆ ದೇಹವೆ ಅಮೂಲ್ಯವಾದುದು. ಆತ್ಮದ ಕಲ್ಪನೆ ಬಂದದ್ದು ಪುರುಷ ಪ್ರಧಾನ ವ್ಯವಸ್ಥೆಗೆ ವಿನಃ ಮಾತೃ ಪ್ರಧಾನ ವ್ಯವಸ್ಥೆಯಲ್ಲಿ ಅಂತಹ ನಂಬಿಕೆಗಳಿರಲಿಲ್ಲ. ತನ್ನೊಳಗಿನ ಗರ್ಭದ ಮೂಲಕವೇ ಸ್ತ್ರೀ ನಿಸರ್ಗದ ಶಕ್ತಿಯನ್ನು ಕಂಡುಕೊಂಡಿದ್ದಳು.

ದೇಹ ಮತ್ತು ಆತ್ಮಗಳೆರಡರಲ್ಲು ಪುರುಷರ ನೆರಳೇ ದಟ್ಟವಾಗಿದೆ. ಗಂಡಸಿನ ಮನಸ್ಸಿನಲ್ಲಿ ದೇಹ ಯಾಕೆ ಮುಖ್ಯವಲ್ಲ ಎಂದರೆ ಆತನಿಗೆ ಹೆರುವ ಗರ್ಭ ಧರಿಸುವ ಸಾಧ್ಯತೆಯೇ ಇಲ್ಲ. ಮಹಿಳೆಗಿರುವ ಗರ್ಭ ಸಾಧ್ಯತೆಯು ಆತ್ಮದ ಅಗತ್ಯವನ್ನು ಬಯಸಲಿಲ್ಲವೆನಿಸುತ್ತದೆ. ಹೆಣ್ಣಿನ ದೇಹದ ನಂಬಿಕೆಯನ್ನು ಅಪಮೌಲ್ಯಗೊಳಿಸುವಂತೆ ಪುರುಷರ ಅವತಾರಗಳಾದ ಧರ್ಮಗಳು ಹೆಣ್ಣಿನ ಮೆಲೆ ನಿಷೇಧ ಹೇರಿದ್ದು ಈ ದಾರಿಯಿಂದಲೇ. ಹೆಣ್ಣಿನ ಕಲ್ಪನೆಯಲ್ಲಿ ದೇಹವು ಮನಸ್ಸಿಗೆ ಸಂಬಂಧಿಸಿದ್ದು 'ತನುಮನ'ದ ಅರ್ಥವು ಅರ್ಪಣೆಗೆ ಸಂಬಂಧಿಸಿದ್ದು. ಅರ್ಪಣೆಯು ಪುರುಷನ ಪ್ರೇಮಕ್ಕೆ ಸಂಬಂಧಿಸಿದ್ದೂ ಆಗಬಲ್ಲದು. ಅಂತೆಯೇ ಅನಂತವಾದ ದಿವ್ಯ ಹಂಬಲಕ್ಕೂ ಮೊರೆಯಿಡುವಂತದ್ದಾಗಿರಬಹುದು. ಮೀರಾಬಾಯಿಯ ಆಲಾಪಗಳು ಇಂತಹ ಪ್ರಜ್ಞೆಯಿಂದಲೇ ಹರಿದುಬಂದಂತವು. ಇಂತಹ ಅರ್ಪಣೆಯಲ್ಲಿ ಸರ್ವವನ್ನೂ ಕಳೆದುಕೊಂಡು ಬಯಸುವ ಆ ಇನ್ನೊಂದು ದಿವ್ಯರೂಪದಲ್ಲಿ ಪ್ರೀತಿ ಪ್ರೇಮ ಮೋಹದಲ್ಲಿ ಲೀನವಾಗಿಸುವಂತದ್ದು ಪುರುಷ ತನ್ನ ಆತ್ಮದ ಮೂಲಕ ದೇವರಲ್ಲಿ ಲೀನವಾಗಲು ಬಯಸಿದರೆ ಸ್ತ್ರೀಯು ತಾನು ಸಂಪೂರ್ಣವಾಗಿ ಅರ್ಪಿಸಿಕೊಂಡ ಪುರುಷನಲ್ಲೇ ಲೀನವಾಗಲು ಬಯಸುತ್ತಾಳೆ. ಇದು ಸ್ತ್ರೀಯರ ದೇಹದ, ಮನಸ್ಸಿನ ಹಾಗೂ ಅಂತರಾಳದ ಸ್ವರೂಪ. ಗಂಡಸು ಆಕೆಯ ದೇಹದ ಹೊರಮೈಯನ್ನು ಮಾತ್ರ ಮೋಹಿಸಿ ಅವಳ ಅಂತರಂಗವನ್ನು ನಿರಾಕರಿಸುತ್ತಾನೆ ಎಂಬುದು ಸಾರ್ವತ್ರಿಕ ಸತ್ಯ ಎಂಬಂತಿದೆ. 'ನೊಂದವರ ನೋವ ನೋಯದವರೆಂತು ಬಲ್ಲರು' ಎಂಬ ಅಕ್ಕಮಹಾದೇವಿಯ ವಚನ ಅಂತಹ ಅಂತರಂಗದ ಪಿಸುಮಾತಿನಂತಿದೆ.

ಈ ಮೇಲಿನ ಚರ್ಚೆಯಲ್ಲೆ 'ದೇಹ' ಮತ್ತು 'ಲಿಂಗ ಭಿನ್ನತೆ'ಗಳ ಬಗೆಗೂ ವಿಶ್ಲೇಷಿಸಬಹುದು. ದೇಹದ ಭಾಗವಾಗಿಯೇ ಲಿಂಗಭಿನ್ನತೆ ಬಂದಿರುವುದು. ಆಕೆಯ ವ್ಯಕ್ತಿತ್ವವನ್ನು ಪ್ರತಿಬಿಂಬಿಸಲು ಪುರುಷ ವಿಶೇಷವಾಗಿ

ಆಕೆಯ ಅಂಗಾಂಗಗಳನ್ನು ಮಾತ್ರ ಪರಿಗಣಿಸುತ್ತಾನೆ. ಸ್ತ್ರೀ ಅಂಗಾಂಗಗಳನ್ನು ಪುರುಷ ಅನುಭೋಗದ ನೆಲೆಯಲ್ಲಿ ಕಂಡಿದ್ದರಿಂದಲೆ ಆಕೆಯ ಜನನಾಂಗಗಳು ತನಗಿಂತ ಕೀಳೆಂದು ಭಾವಿಸಿದ. ಹೆಣ್ಣು ಎಂದರೆ ದುರ್ಬಲ ಎಂದೇ ತಿಳಿದ. ದೇಹ ಮತ್ತು ಲಿಂಗ ಸಂಬಂಧಗಳು ತಾರತಮ್ಯಕ್ಕೆ ಒಳಗಾದುದು ಈ ದಾರಿಯಿಂದಲೇ. ಬೀಜ ಪ್ರಜ್ಞೆಯು ಇಲ್ಲಿ ಪುರುಷ ಗರ್ವದಿಂದ ಸ್ತ್ರೀ ಲಿಂಗವನ್ನು ನೀಚವೆಂದು ಪರಿಗಣಿಸಿದೆ. ಇದು ಎಲ್ಲಿವರೆಗೆ ವಿಸ್ತರಿಸಿದೆ ಎಂದರೆ ಎಲ್ಲ ಮಹಾತ್ಮರು, ದೇವ ಪುರುಷರು, ಪವಾಡ ವೀರರು, ಸಾಂಸ್ಕೃತಿಕ ನಾಯಕರು, ಗ್ರಾಮದೈವಗಳು, ದೇವಾನುದೇವರುಗಳೆಲ್ಲರೂ ಅಯೋನಿಜರೇ. ಅವರೆಲ್ಲರೂ ಸ್ವಯಂ ಭೂ ಆಗಿ ಹುಟ್ಟುವರು. ಅಷ್ಟೇ ಏಕೆ, ವರ್ಣಾಶ್ರಮ ಪದ್ಧತಿಯ ಮೂಲಕ ಯಾರೊಬ್ಬರೂ ಯೋನಿ ಮೂಲಕ ಜನಿಸಿದವರೇ ಅಲ್ಲ. ಅವರೆಲ್ಲರೂ ಪುರಾಣ ಶಾಸ್ತ್ರ ಧರ್ಮಗ್ರಂಥಗಳ ಪ್ರಕಾರ ತಲೆ, ತೋಳು, ತೊಡೆ, ಪಾದಗಳಿಂದ ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು, ಶೂದ್ರರು ಜನಿಸಿದರೆಂದು ಹೇಳುವಲ್ಲಿಯೇ ಹೆಣ್ಣ ದೇಹವು ಜನ್ಮ ಕೊಡುವುದಕ್ಕೆ ಅಯೋಗ್ಯವೆಂಬ ಧ್ವನಿಯನ್ನು ಬಿತ್ತಲಾಗಿದೆ. ಅದೂ ಬ್ರಹ್ಮನ ದೇಹದಿಂದ ಈ ನಾಲ್ಕು ಚಾತುರ್ವರ್ಣಗಳು ಹುಟ್ಟಿದವೆಂಬುದು ಪುರುಷಾಧಿಪತ್ಯದ ರೀತಿಗೆ ಸೂಕ್ತ ಉದಾಹರಣೆಯಾಗಿದೆ. ಇಷ್ಟೆ ಅಲ್ಲದೆ ದೇವರುಗಳ ಬೆವರಿನಿಂದ, ಕೊಳೆಯಿಂದ ಕೂಡ ಕೆಲವರು ಜನಿಸಿದ್ದಕ್ಕೆ ಪುರಾಣಗಳು ಸಾಕ್ಷ್ಯ ನೀಡುತ್ತವೆ. ಇನ್ನು ಪಂಚಮರು ಅಂತಹ ಪುರಾಣಗಳ ಪ್ರಕಾರ ಎಲ್ಲ ಹೇಗೆ ಹುಟ್ಟಿದರೆಂಬುದಕ್ಕೆ ಪುರಾವೆ ನೀಡುವುದಿಲ್ಲ. ಬ್ರಹ್ಮನ ಅಂಶದಿಂದ ಸ್ತ್ರೀ ಜನಿಸಿದಳೆಂತಲೂ ಹೇಳಲಾಗುತ್ತದೆ. ಲಿಂಗ ಶ್ರೇಷ್ಠತೆಯ ಪರಾಕಾಷ್ಠೆ ಮೆರೆಯಲು ಇಂತಹ ಪುರಾಣಗಳನ್ನು ಕಟ್ಟಿಕೊಳ್ಳಲಾಗಿದೆ. ಎಲ್ಲ ಪುರುಷ ಶ್ರೇಷ್ಠ ಧರ್ಮಗಳ ಪ್ರಕಾರ ದೇವರೇ ಸಕಲ ಚರಾಚರ ಜೀವ ಜಾಲವನ್ನು ಈ ಲೋಕ ಲೋಕಾಂತರಗಳನ್ನು ನಿರ್ಮಿಸಿದನೆಂದು ಹೇಳುತ್ತವೆ. ಇವುಗಳ ಅರ್ಥವೇನೆಂದರೆ ಹೆಣ್ಣಿನ ಸೃಷ್ಟಿಶೀಲ ಚೈತನ್ಯವನ್ನೆ ನಿರಾಕರಿಸುವುದು ಹಾಗೂ ಹೆಣ್ಣಿನ ಅಗತ್ಯವೆ ಇಲ್ಲದೆ ಈ ಲೊಕಲೋಕಾಂತಗಳು ತಮ್ಮ ತಮ್ಮ ಅಸ್ತಿತ್ವವನ್ನು ರೂಪಿಸಿಕೊಂಡು ಮುನ್ನಡೆಯುತ್ತವೆ ಎಂಬುದು. ಇಂತಹ ಪೂರ್ವಾಗ್ರಹದಿಂದಲೇ ಹೆಣ್ಣಿನ ಲಿಂಗ ವ್ಯವಸ್ಥೆಯ ಬಗ್ಗೆ ಪರಂಪರೆಯ ಉದ್ದಕ್ಕೂ ಕ್ರೂರವಾದ ನಿಯಮಾಚರಣೆಗಳು ಬೆಳೆದುಬಂದದ್ದು. ಅದರಲ್ಲೂ ಧರ್ಮ, ದೇವರು, ಮುಕ್ತಿ ಮಾರ್ಗಗಳ ವಿಚಾರದಲ್ಲಿ ಹೆಣ್ಣಿಗೆ ಸ್ವಾತಂತ್ರ್ಯವನ್ನು ನಿರಾಕರಿಸಿದ್ದುದು. ಸ್ವತಃ ದೇವರುಗಳೇ ಇಂತಹ ಲಿಂಗ ತಾರತಮ್ಯಕ್ಕೆ ಒಳಗಾಗಿವೆ. ಪುರಾಣಗಳ ಪ್ರಕಾರವೇ ಹೇಳುವುದಾದರೆ 'ಸೃಷ್ಟಿಕರ್ತ'ನಾದ ದೇವರು ತನಗೆ ಒಬ್ಬನೆ ಇರಲು ಬೇಸರವಾಗಿ ಕೊನೆಗೆ ಎಲ್ಲ ಸೃಷ್ಟಿಸಿ ಆದ ಮೆಲೆ ಉಳಿದಿದ್ದ ಒಂದಿಷ್ಟು ಮಾಂಸದ ಮುದ್ದೆಯಿಂದ ಹೆಣ್ಣು ರೂಪವನ್ನು ಮಾಡಿ ಅದಕ್ಕೆ ಜೀವ ತುಂಬಿ ತನ್ನ ಜೊತೆಗಿಟ್ಟುಕೊಂಡನಂತೆ. ಇದು ಎಂತಹ ಸಮಾಗಮ; ಎಂತಹ ಲಿಂಗ ಸಂಬಂಧ! ದೇವರುಗಳೇ ಹೆಣ್ಣನ್ನು ದಾಸಿಯರಂತೆ ಇಟ್ಟುಕೊಂಡಿವೆ. ದೇವರ ಪತ್ನಿಯರೆಲ್ಲರೂ ಸದಾ ಸೇವೆಗೆ ಸಿದ್ಧ ಎಂಬಂತೆ ಪತಿ ದೇವರ ಕಾಲ ಬಳಿಯೇ ಕಾದುಕುಳಿತಿರುತ್ತವೆ. ಗಂಡನಾದವನು ದೇವರಿಗೆ ಸಮ ಎಂದು ಹೇಳುವ ಸಂಹಿತೆಗಳೂ ದೇವರ ಮೂಲಕವೇ ಬಂದವೆಂದು ಹೇಳುವುದು ಇನ್ನೊಂದು ಅವತಾರವಷ್ಟೆ. ಈ ಹಿನ್ನೆಲೆಗಳನ್ನು ಗಮನಿಸಿದರೆ ಹೆಣ್ಣಿನ ಲಿಂಗದ ಬಗೆಗೆ ಯಾವ ಪುರುಷ ಸೂಕ್ತವೂ ಗೌರವದಿಂದ ನಡೆದುಕೊಂಡಿಲ್ಲ.

ಆದರೆ ವಿಧಿಯಮ್ಮನ ಕಲ್ಪನೆ ಜನಪದರದು. ಆ ಮಾತೃಮೌಲ್ಯ ಪಳೆಯುಳಿಕೆ ಈಗಲೂ ಕೇವಲ 'ಕತೆ' ಯಾಗಿ ಉಳಿದುಕೊಂಡಿದೆಯೇ ಹೊರತು ಪವಿತ್ರ ಪುರಾಣ ಸಂಹಿತೆಯಾಗಿ ಅಲ್ಲ. ಶಿಷ್ಟ ಪುರಾಣಗಳೆಲ್ಲವೂ ಗಂಡಿನ ಲಿಂಗ

ಪಾರಮ್ಯವನ್ನು ಸಾರುತ್ತವೆ. ಪುರುಷನ ಅವತಾರಗಳೆಲ್ಲ ದೇವರಾಗಿ ಹೆಣ್ಣಿನ ಅಸ್ತಿತ್ವವನ್ನು ಉಪೇಕ್ಷಿಸುತ್ತವೆ. ಇದು ಲಿಂಗ ತಾರತಮ್ಯವನ್ನು ಧಾರ್ಮಿಕವಾಗಿಯೇ ಆಚರಿಸಿದಂತಾಗುತ್ತದೆ. ಲಿಂಗದ ಸಂಯೋಗವನ್ನು ಪ್ರತಿನಿಧಿಸುವ 'ಶಿವಲಿಂಗ' ಕೂಡ ವಾಸ್ತವದಲ್ಲಿ ಹೆಣ್ಣಿನ ಪರವಲ್ಲ. ದ್ರಾವಿಡ ಪರಂಪರೆಯ ಪ್ರತೀಕದಂತಿರುವ ಶಿವಲಿಂಗವು ಧಾರ್ಮಿಕವಾಗಿ ತನ್ನ ಲಾಂಛನವನ್ನು ಸಾರುತ್ತದೆಯೇ ವಿನಃ ಲಿಂಗಕ್ಕೆ ಆಸರೆಯಾಗಿರುವ ಯೋನಿ ರೂಪಕವನ್ನು ಮಾನ್ಯ ಮಾಡುವುದಿಲ್ಲ. ಶಿವನನ್ನು ಅರ್ಧನಾರೀಶ್ವರ ಎಂದು ಧ್ವನಿಸುವುದು ಸುಂದರವಾಗಿದ್ದರೂ, ಶಿವ ಹೆಣ್ಣನ್ನು ತಲೆ ಮೇಲೆ ಹೊತ್ತು ತೊಡೆ ಮೆಲೆ ಕೂರಿಸಿಕೊಂಡಿರುವ ಕಲಾತ್ಮಕ ಚಿತ್ರ ಕಣ್ಣ ಎದುರು ಬಂದರೂ ಈ ಸುಂದರ ಆದರ್ಶವು ವಾಸ್ತವ ಅಲ್ಲ ಎಂಬುದನ್ನು ಮರೆಯಕೂಡದು.

ಯೋನಿ ಪೂಜೆಯನ್ನು ಆದಿಮ ಸಮಾಜದ ಮೂಲಕ ಅರ್ಥೈಸಿದರೆ ಕಾಣುವ ಅರ್ಥ ಬೇರೆ. ಲಿಂಗ ಸಮಾನತೆಯ ಧ್ಯೋತಕವಾಗಿ ಈ ಆಚರಣೆಯನ್ನು ಗಮನಿಸಬಹುದು. 'ಯೋನಿ' ಸೃಷ್ಟಿ ಸಂಕೇತವಾಗಿ ಆರಾಧಿ ಸಲ್ಪಡುತ್ತಿತ್ತು. ವರ್ತಮಾನ ಸಮಾಜದಲ್ಲಿ ಯೋನಿ ಪೂಜೆಗೆ ಅರ್ಥ ಮಹತ್ವವಿಲ್ಲ. ಅದೊಂದು ಪ್ರಾಚೀನ ಪೂಜಾ ವಿಧಾನವಾಗಿದ್ದು ಮಕ್ಕಳನ್ನು ಪಡೆವ ಫಲವಂತಿಕೆಯ ಆಚರಣೆಯಾಗಿತ್ತು. ಹೆಣ್ಣು ಗಂಡಿನ ಎರಡೂ ಅಂಗಗಳನ್ನು ಪೂಜಿಸುವುದರ ಹಿಂದಿನ ಆಶಯಗಳು ಈಗ ಜಾರಿಯಲ್ಲಿಲ್ಲ. ಅಂತಹ ಪೂಜಾ ವಿಧಾನಕ್ಕೀಗ ಅವಕಾಶವೂ ಇಲ್ಲ. ಹಳೆ ಕಾಲದ ನಂಬಿಕೆಗಳಿಗೂ ಈ ಕಾಲದ ಜೀವನ ವಿಧಾನಕ್ಕೂ ಅನೇಕ ವೈರುಧ್ಯಗಳಿವೆ. ಗಂಡಸಿನ ಬೀಜ ಪ್ರಜ್ಞೆಯು ನೈಸರ್ಗಿಕವಾದುದಲ್ಲ. ಅದೊಂದು ಪುರುಷ ಪೂರ್ವಾಗ್ರಹ. ಹೆಣ್ಣಿಗೂ ಪೂರ್ವಾಗ್ರಹಗಳಿವೆ. ಇಲ್ಲವೆಂದಲ್ಲ. ಆದರೆ ಆಕೆಯ ಲಿಂಗದ ಕಲ್ಪನೆ ಪೂರ್ವಾಗ್ರಹದ್ದಲ್ಲ. ಲಿಂಗದ ಕಲ್ಪನೆಯು ಗರ್ಭಕ್ಕೆ ಸಂಬಂಧಿಸಿದಂತೆ ಬೆಳೆದು ಬಂದಿದ್ದು ಜೀವ ನೀಡುವ ಬಿಂದುವಾಗಿ ಭಾವಿಸಲ್ಪಟ್ಟಿದೆ. ಬ್ರಹ್ಮಚರ್ಯೆಯು ಕೂಡ ಪುರುಷ ಪ್ರಜ್ಞೆಯ ಪ್ರತಿಷ್ಠೆಯೆ ಆಗಿದ್ದು ಲಿಂಗ ಶ್ರೇಷ್ಠತೆಯನ್ನು ಬಿಂಬಿಸುವಂತದ್ದಾಗಿದೆ. ಹೀಗಾಗಿಯೇ ಯಾವ ಪುರುಷ ಪ್ರಧಾನ ದೇವರುಗಳಿಗೂ ಹೆಣ್ಣುಮಕ್ಕಳಿಲ್ಲ. ಗಂಡು ಮಕ್ಕಳನ್ನು ಮಾತ್ರ ಪಡೆದ ದೇವರುಗಳ ಧರ್ಮಗಳಲ್ಲಿ ಕೇವಲ ದೇವ ಕನ್ನೆಯರು, ದೇವ ನರ್ತಕಿಯರು, ಇಂದ್ರ ಭೋಗದ ಅಪ್ಸರೆಯರು ಮಾತ್ರ ಸ್ವರ್ಗದಲ್ಲಿ ಪುರುಷರಿಗೆ ಪ್ರಿಯವಾಗಿರುವುದು ವಿಷಾದನೀಯ.

ಮೇಲಿನ ಚರ್ಚೆಗಳಿಗೆ ಪೂರಕವಾಗಿ ಹೆಣ್ಣಿನ ದೇಹ ರಚನೆಯ ಜೈವಿಕ ಅಂಶಗಳನ್ನು ಗಮನಿಸಬಹುದು. ಲಿಂಗ ತಾರತಮ್ಯದ ಪುರುಷ ಪೂರ್ವಾಗ್ರಹದ ಸಂದರ್ಭದಲ್ಲಿ ಇದು ಮುಖ್ಯ. ಸ್ತ್ರೀವಾದಿ ಚಿಂತನೆಯಲ್ಲಿ ಶರೀರ ರಚನೆಯ ಜೈವಿಕ ಕಾರಣಗಳನ್ನು ವಿಶ್ಲೇಷಿಸುವುದು ಸಿಮೋನ್‌ದ ಬುವಾ ಅವರಿಂದ ಸಮರ್ಥವಾಗಿ ನಡೆದು ಬಂದಿದೆ. ಹೆಣ್ಣಿನ ದೈಹಿಕ ಗುಣ ನಿಸರ್ಗದಲ್ಲೆ ವಿಶಿಷ್ಟವಾದದ್ದು. ಜೀವಜಾಲದ ವಿಕಾಸ ಪ್ರಕ್ರಿಯೆಯಲ್ಲಿ ಇದು ಗಂಡಿನ ಸಾಮರ್ಥ್ಯಕ್ಕಿಂತ ವಿಶಿಷ್ಟವಾದುದು. ಜೀವ ಸೃಷ್ಟಿಗೆ ತಕ್ಕ ನೆಲೆ ಸ್ತ್ರೀಯ ಗರ್ಭವೇ ಎಂದು ನಿಸರ್ಗವು ಆಕೆಯನ್ನು ಆಯ್ಕೆಮಾಡಿಕೊಂಡಿರುವುದು ಆಕೆಯ ಸಾಮರ್ಥ್ಯವನ್ನು ತಿಳಿಸುತ್ತದೆ. ಸೃಷ್ಟಿ ಶೀಲತೆಯಲ್ಲಿ ಹೆಣ್ಣು ಗಂಡಿಗಿಂತ ವಿಕಾಸ ಚಕ್ರದಲ್ಲಿ ಬಹಳ ಮುಂದೆ ಸಾಗಿದೆ. ಹೆಣ್ಣು ಮಗುವಿನ ಬಗ್ಗೆ ಮೂಗು ಮುರಿಯುವ ಗಂಡಸರು ಅದೇ 'ಸ್ತ್ರೀ ಜೀವ'ಕ್ಕೆ ಎಷ್ಟೊಂದು ಸಾಧ್ಯತೆ ಇದೆ ಎಂಬುದನ್ನು ವೈಜ್ಞಾನಿಕ ಆಧಾರಗಳ ಮೂಲಕ ತಿಳಿದುಕೊಳ್ಳಬೇಕಾದ

ಅವಶ್ಯಕತೆ ಇದೆ. ಹೆಣ್ಣು ಶಿಶು ತಾಯ ಗರ್ಭದಲ್ಲಿರುವಾಗಲೇ ಗರ್ಭದ ಋತುಚಕ್ರಕ್ಕೆ ಸಿದ್ಧವಾಗಿರುತ್ತದೆ! ಹೆಣ್ಣು ಶಿಶುವಿನ ಶರೀರ ರಚನೆಯು ಸೃಷ್ಟಿಸುವ ಜೈವಿಕ ಗುಣವನ್ನು ತಾಯ ಗರ್ಭದಿಂದಲೇ ಅನುವಂಶಿಯವಾಗಿ ಪಡೆದಿರುತ್ತದೆ. ಹೆಣ್ಣಿನ ದೇಹ ಇದರಿಂದ ಎಷ್ಟು ಪ್ರಬಲ ಎಂಬುದು ತಿಳಿಯುತ್ತದೆ. ತಾಯ ಗರ್ಭದಲ್ಲೆ ಹೆಣ್ಣು ಮಗುವಿನ ಜನನಾಂಗದಿಂದ ಋತುಚಕ್ರದ ಸ್ವಭಾವ ಕ್ರಿಯಾಶೀಲವಾಗಿರುವುದನ್ನು ಸಂಶೋಧನೆಗಳು ದೃಢಪಡಿಸಿವೆ. ಅಂದರೆ ಹೆಣ್ಣಿನ ಜೀವ ಶಕ್ತಿಯು ಮಾನವ ಕುಲವನ್ನು ವಿಸ್ತರಿಸಲು ಗರ್ಭಸ್ಥಿತಿಯಲ್ಲಿಂದಲೇ ಸಾಮರ್ಥ್ಯವನ್ನು ಗಳಿಸಿಕೊಂಡಿರುತ್ತದೆ. ಗಂಡು ಮಗು ಇಂತಹ ಗುಣವನ್ನು ಪಡೆಯಲು ಸಾಧ್ಯವೇ ಇಲ್ಲ. ಮಗುವಾಗಿ ಹುಟ್ಟಿದ ಗಂಡು ಮಗು ತನ್ನ ಎಂಟನೆ ವರ್ಷದ ನಂತರಕ್ಕೆ ಅತ್ಯಂತ ಕನಿಷ್ಠ ಪ್ರಮಾಣದಲ್ಲಿ ಲೈಂಗಿಕ ಹಾಗೂ ಸೃಷ್ಟಿಶೀಲ ಶಕ್ತಿಯನ್ನು ಪಡೆಯುತ್ತದೆ.

ಇಂತಹ ಅಂತರವಿರುವ ಹೆಣ್ಣು ಗಂಡಿನ ಲಿಂಗ ಸಾಮರ್ಥ್ಯವನ್ನು ವಿಕಾಸ ಪ್ರಕ್ರಿಯೆಯಲ್ಲಿ ಗಂಭೀರವಾಗಿ ಗಮನಿಸಬೇಕು. ಮುಂದೆ ಒಂದು ಕಾಲಕ್ಕೆ ಗಂಡಿನ ಅವಶ್ಯಕತೆಯೇ ಇಲ್ಲದೆ ಹೆಣ್ಣು ಸೃಷ್ಟಿಶೀಲಳಾಗಬಹುದು. ಜೀವಜಾಲದಲ್ಲಿ ಅಂತಹ ಅನೇಕ ಉದಾಹರಣೆಗಳಿವೆ. ಪುರುಷ ಸ್ಪರ್ಶವಿಲ್ಲದೆ ಸ್ತ್ರೀ ಲಿಂಗವು ಫಲವಂತವಾಗಬಲ್ಲದು. ಪುರಾಣಗಳು ಹೇಳುವ ಲಿಂಗ ತಾರತಮ್ಯಕ್ಕೂ, ಧರ್ಮಶಾಸ್ತ್ರಗಳ ಉಪೇಕ್ಷಾಭಾವಕ್ಕೂ ವಿಜ್ಞಾನ ಮತ್ತು ನಿಸರ್ಗ ಹೇಳುವ ವಾಸ್ತವ ಸತ್ಯಕ್ಕೂ ಬಹಳ ಅಂತರವಿದೆ. ಸೃಷ್ಟಿಯಲ್ಲಿ ಲಿಂಗ ತಾರತಮ್ಯವಿಲ್ಲ. ನಿಸರ್ಗ ಸಮನಾಗಿ ಲಿಂಗ ಸಾಮರ್ಥ್ಯವನ್ನು ನೀಡಿದೆ ಮನುಷ್ಯರು ಮಾತ್ರ ಪೂರ್ವಾಗ್ರಹಗಳಿಂದ ಭೇದ ಕಲ್ಪನೆಗಳನ್ನು ರೂಢಿಸಿಕೊಂಡು ಬಂದಿದ್ದಾರೆ. ಸೃಷ್ಟಿ ಪ್ರಕ್ರಿಯೆಯಲ್ಲಿ ಯಾವುದೂ ಮೊದಲಲ್ಲ, ಕೊನೆಯಲ್ಲ. ಅನಂತವಾದ ವಿಕಾಸವೆ ವಾಸ್ತವ ಅದರ ಪಯಣದಲ್ಲಿ ಹೆಣ್ಣು ಗಂಡಿನ ಸಂಬಂಧವು ಮುಖ್ಯವಾಗಬೇಕು. ಈ ಹಿನ್ನೆಲೆಯಲ್ಲಿ ಹಿಂದಿನ ಅಧ್ಯಾಯದ ಕೊನೆಯಲ್ಲಿ ಎತ್ತಿದ್ದ ಗಂಡು ಹೆಣ್ಣಿನ ಲಿಂಗ ಸಂಬಂಧದ ಪ್ರಶ್ನೆಗಳನ್ನು ಪರಿಶೀಲಿಸಬಹುದು.

ಆ ಪ್ರಶ್ನೆಗಳಲ್ಲಿ ಮೊದಲಿನದು: ಪುರುಷಾಧಿಪತ್ಯದ ಎದಿರು ಯಾಕೆ ಸ್ತ್ರೀ ಸೌಮ್ಯಳಾದಳು ಎಂಬುದು. ಸೌಮ್ಯ ಸ್ವಭಾವ ಮತಿಯಲ್ಲ, ಅದನ್ನು ದುರ್ಬಲ ಸ್ಥಿತಿ ಎಂದು ಪುರುಷರು ತಪ್ಪಾಗಿ ಭಾವಿಸಿದ್ದಾರೆ. ಸೌಮ್ಯತೆಯು ತಾಳಿಕೆಯ ಗುಣ, ಅತಿಕ್ರಮಣವನ್ನು ತಾಳ್ಮೆಯಿಂದ ನಿಭಾಯಿಸುವ ರೀತಿ. ನಿಸರ್ಗದ ಸುಂದರ ಸ್ಥಿತಿ ಹೆಣ್ಣಿನಲ್ಲಿ ಸೌಮ್ಯತೆಯನ್ನು ರೂಪಿಸಿದೆ. ಇದು ಜೈವಿಕ ವೈಶಿಷ್ಟ್ಯವಾಗಿ ಹೆಣ್ಣಿನಲ್ಲಿ ಅಡಕವಾಗಿರುವ ಅಂಶ. ಬದುಕುಳಿಯುವ ಅಸ್ತಿತ್ವವಾಗಿಯೂ ಸೌಮ್ಯತೆಯು ಬೆಳೆದುಬಂದಿದೆ. ಹೀಗಿದ್ದಾಗ್ಯೂ ಲಿಂಗ ತಾರತಮ್ಯ ಬಂದುದೇಕೆ ಎಂಬ ಪ್ರಶ್ನೆ ಹಿಂದಿನಿಂದಲೂ ಮುಂದುವರಿದುಕೊಂಡೇ ಬಂದಿದೆ. ಇದರ ಹಿನ್ನೆಲೆಯನ್ನು ಪರಿಶೀಲಿಸಬೇಕಾದುದಿದೆ. ಭಾಗಶಃ ಪುರುಷ ಸೌಮ್ಯತೆಯನ್ನು ಹೆಣ್ಣಿನ ಸೋಲು ಎಂದು ಭಾವಿಸಿದ್ದಾನೆ ಅಥವಾ ಸೌಮ್ಯ ಗುಣವು ಉಪಯುಕ್ತವಲ್ಲದ್ದು ಎಂದು ನಂಬಿರಬಹುದು ಸೌಮ್ಯತೆಯನ್ನು ಶೋಷಿಸುವುದು ಸುಲಭ. ಅಂತೆಯೇ ಆ ಬಗೆಯ ಗುಣವನ್ನು ದುರುಪಯೋಗಪಡಿಸಿಕೊಂಡು ತನ್ನ ಸ್ವಾರ್ಥ ಸಾಧನೆಗೆ ಬಳಸಿಕೊಳ್ಳುವುದು ಪುರುಷ ವ್ಯವಸ್ಥೆಗೆ ಅನುಕೂಲವಾಗಿ ಕಂಡಿದೆ. ಇಂತಹ ಸ್ಥಿತಿಯಲ್ಲಿ ಆಕೆಗೆ ಇದ್ದ ಆಯ್ಕೆಗಳೇನು ಎಂಬುದು ಅಸ್ಪಷ್ಟವಾಗಿದೆ. ಭಾಗಶಃ ಸ್ತ್ರೀ ಇಂತಹ ಒತ್ತಡ

ಹಾಗೂ ಲಿಂಗ ಶೋಷಣೆಯಲ್ಲಿ ಸಹಿಸಿಕೊಳ್ಳುವುದೇ ತನ್ನ ಆಯ್ಕೆ ಎಂದು ಭಾವಿಸಿರಬೇಕು. ಹಿಂಸೆಯನ್ನು ಒಪ್ಪಿಕೊಂಡು ಅದರ ಜೊತೆ ಹೊಂದಾಣಿಕೆ ಮಾಡಿಕೊಂಡಿದ್ದರಿಂದಲೆ ಮಹಿಳೆ ನಿಸರ್ಗದ ಜೊತೆ ಭಾವನಾತ್ಮಕ ಸಂಬಂಧವನ್ನು ರೂಪಿಸಿಕೊಂಡು ಕೌಟುಂಬಿಕ ವ್ಯಾಪ್ತಿಯ ಸಾಂಸ್ಕೃತಿಕ ಆವರಣದಲ್ಲಿ ಮೈಮರೆತಳು. ಹಿಂಸೆಯನ್ನು ಸಹಿಸಿಕೊಂಡ ಈ ರೀತಿಯನ್ನು ಬದುಕುಳಿಯುವ ಅಸ್ತಿತ್ವದ ಹೊಂದಾಣಿಕೆ ಎಂದು ಅರ್ಥೈಸಬಹುದು. ಹೊಂದಾಣಿಕೆಯ ಒಳಗೆಯೆ ಮೌಖಿಕ ಪರಂಪರೆಯ ಅಭಿವ್ಯಕ್ತಿಯನ್ನೂ ಸ್ತ್ರೀಯರು ವಿಸ್ತರಿಸಿಕೊಂಡರು. ಹಾಡುವ ಆಚರಿಸುವ ಮೌನ ವಹಿಸುವ ಗುಣ ಸ್ತ್ರೀಯರಿಗೆ ಪುರುಷ ತಾರತಮ್ಯದ ಮೂಲಕವೂ ಬಂದಿದೆ. ಜನಪದ ಪರಂಪರೆಯ ಬಹುತೇಕ ಲಿಂಗ ಶೋಷಣೆಯ ಆಚರಣೆಗಳ ಸಂದರ್ಭದಲ್ಲಿ ಮಹಿಳೆಯರು ಸ್ವದುರಂತವನ್ನು ಪರ ದುರಂತದಂತೆ ಹಾಡಿಕೊಂಡು ಲಿಂಗಬೇಧದ ಹಿಂಸೆಯನ್ನು ರೂಪಾಂತರಿಸಿಕೊಂಡಿದ್ದಾರೆ. ಈ ಪರಿಯ ಸಂಕೀರ್ಣ ಸ್ಥಿತಿಯಲ್ಲಿ ಮಹಿಳೆ ಪುರುಷನ ಜೊತೆ ತನ್ನ ದೇಹ ಮತ್ತು ಮನಸ್ಸುಗಳೆರಡಲ್ಲೂ ಪ್ರೇಮದಲ್ಲೆ ಮೋಹದಲ್ಲೆ ತ್ಯಾಗದಲ್ಲೆ ಅರ್ಪಿಸಿಕೊಳ್ಳುವ ಒಪ್ಪಂದಗಳನ್ನು ಮಾಡಿಕೊಂಡಿದ್ದಾಳೆ. ನಿಸರ್ಗದ ಜೈವಿಕ ಅಗತ್ಯ ಹಾಗೂ ಆಕರ್ಷಣೆ ತಂತಾನೆ ಆಗುವುದು ಬೇರೆ. ಅಗತ್ಯದ ಆ ಕ್ಷಣದಲ್ಲಿ ಲಿಂಗ ಬೇಧಗಳು ಸುಳಿದಿರಬಹುದು. ಆದರೆ ನೈಸರ್ಗಿಕ ಕ್ರಿಯೆಯ ನಂತರಕ್ಕೆ ಉಂಟಾಗುವ ತಾರತಮ್ಯ ಮತ್ತು ಒಪ್ಪಂದಗಳು ಕ್ರೂರವಾಗಿಯೇ ಘಟಿಸಿವೆ. ವಿವಾಹ ಸಂಸ್ಥೆಯಲ್ಲಿ ಇಡಿ ಹೆಣ್ಣು ತನ್ನ ತನು ಮನವನ್ನೇ ಗಂಡಸಿಗೆ ಅರ್ಪಿಸಿಕೊಳ್ಳಬೇಕಾದ ಸಂಹಿತೆ ಇದೆ. ಜೊತೆಗೆ ತನ್ನ ಹೊಕ್ಕಳ ಬಳ್ಳಿಯ ಕುಡಿಯೆ ರಕ್ತಸಂಬಂಧವನ್ನು ತುಂಡು ಮಾಡಿಕೊಂಡು ಗಂಡನ ಮೂಲಕ ಮಕ್ಕಳಿಗೆ ಗುರುತು ಬರುವಂತೆಯೂ ಒಪ್ಪಂದ ಮಾಡಿಕೊಂಡಿದ್ದಾಳೆ. ಎಲ್ಲಾ ಧಾರ್ಮಿಕ, ಸಾಂಸ್ಕೃತಿಕ, ಆರ್ಥಿಕ, ಸಾಮಾಜಿಕ ವಿಚಾರಗಳಲ್ಲಿಯೂ ಪುರುಷರ ಅಧಿಕಾರವೆ ಅಂತಿಮ ಎಂದು ಒಪ್ಪಿಕೊಂಡಿದ್ದಾಳೆ. ಈ ಒಪ್ಪಂದವು ಇದೇ ಸ್ತ್ರೀಯ ವ್ಯಕ್ತಿತ್ವವೇ ಅಸ್ತಿತ್ವವನ್ನು ಕಳೆದುಕೊಳ್ಳುವಂತೆ ಮಾಡಿದೆ. ಆದ್ದರಿಂದಲೇ ತಾಯಿಗಿಂತಲೂ ಮಕ್ಕಳಿಗೆ ತಂದೆಯೇ ಮುಖ್ಯವಾಗಿ ಹೆಣ್ಣುಮಕ್ಕಳಿಗೆ ಯಾವುದೇ ಕೌಟುಂಬಿಕ ಅಧಿಕಾರಗಳು ಇಲ್ಲವಾದುದು. ಇಂತಲ್ಲಿ ತಾಯಿಯ ಹಕ್ಕುಗಳು ಯಾವುವೂ ಇಲ್ಲವಾಗಿ ಕೇವಲ ಕರ್ತವ್ಯಗಳನ್ನು ಮಾತ್ರ ಆಕೆ ಅನುಸರಿಸಬೇಕಾಗಿ ಬಂದುದು. ಲಿಂಗ ತಾರತಮ್ಯದಲ್ಲಿ ಇನ್ನಷ್ಟು ಅಂತರ ಸೃಷ್ಟಿಸಿತು. ಶವಸಂಸ್ಕಾರಗಳಲ್ಲೂ ಸ್ತ್ರೀಯರಿಗೆ ತಾರತಮ್ಯವಿದೆ. ಗಂಡಸರ ರುದ್ರಭೂಮಿಯಲ್ಲಿ ಮಹಿಳೆಯರನ್ನು ಹೂಳಬಹುದು, ಸುಡಬಹುದು ಎಂದು ಪುರುಷ ಸಮಾಜ ಕೃಪೆ ತೋರಿರುವುದು ಅದೃಷ್ಟದ ಸಂಗತಿ. ತಂದೆಯ ಶವಸಂಸ್ಕಾರಗಳಲ್ಲಿ ಹೆಣ್ಣುಮಕ್ಕಳು ಮುಡಿಕೊಡುವಂತಿಲ್ಲ. ಹಿರಿ ಮಗನೇ ತಂದೆಯ ಮುಕ್ತಿ ಹಾದಿಗೆ ಅಶ್ರುತರ್ಪಣ ಬಿಡುವುದು. ಸಾವಿನ ನಂತರವೂ ಈ ಲಿಂಗ ತಾರತಮ್ಯ ಮುಂದುವರಿಯುತ್ತದೆ. ಪತಿಭಕ್ತಿಯೇ ಅವಳಿಗೆ ಮುಕ್ತಿ ಮಾರ್ಗವನ್ನು ತೋರುವುದೆಂದು ಪುರುಷ ಸೂಕ್ತ ಹೇಳುತ್ತದೆ. ಈ ಬಗೆಯ ಅಸಮಾನತೆಯಲ್ಲಿ ಸ್ತ್ರೀ ಸಮುದಾಯ ಪ್ರತಿಭಟಿಸಲು ಯಾಕೆ ಸಾಧ್ಯವಾಗಲಿಲ್ಲ? ಆಕೆಯ ಮನಸ್ಥಿತಿಯ ಒಳಾವರಣವೇನು ಎಂದು ತಿಳಿಯುವ ಪ್ರಯತ್ನವನ್ನು ಈ ಅಧ್ಯಯನದಲ್ಲಿ ಮಾಡಬಹುದು.

ಸ್ವನಿಯಂತ್ರಣ ಮನಸ್ಸು ವಿಶೇಷವಾಗಿ ಮಹಿಳೆಯರಲ್ಲಿ ವಿಕಾಸಗೊಂಡಿದೆ. ಇದನ್ನು ಸಂಯಮ ಎಂದು ಕರೆಯಬಹುದು. ಅಸಾಧಾರಣ ತಾಳ್ಮೆ ಸಮಬೆತ್ತಲೆಯಿದ್ದಾಗ ಮಾತ್ರ ಇಂತಹ ಸ್ವನಿಯಂತ್ರಿತ ಮನಸ್ಸು ಬೆಳೆಯಲು ಸಾಧ್ಯ. ಹೆಣ್ಣಿನ ಮನಸ್ಸು ಚಂಚಲ ಎಂಬ ಆರೋಪವೂ ಗಂಡಸಿನ ದುರ್ಬಲ ಮನಸ್ಸಿನಿಂದ ಬಂದುದಾಗಿಯೇ

ಹೊರತು ಹೆಣ್ಣಿನ ಮನಸ್ಸು ಗಾಢವಾಗಿ ಅರ್ಪಿಸಿಕೊಳ್ಳುವಂತದ್ದು ಹಾಗೂ ನಂಬಿದ್ದನ್ನು ಅತ್ಯಂತಿಕವಾಗಿ ಅಂತರಂಗದಲ್ಲಿ ಸ್ಥಿರೀಕರಿಸಿಕೊಳ್ಳುವಂತದ್ದು. ಈ ಬಗೆಯ ಆಕೆಯ ಗುಣದಿಂದಾಗಿಯೇ ಸ್ತ್ರೀ ಮನಸ್ಸು ತ್ಯಾಗ ಬುದ್ಧಿಯನ್ನು ಪಡೆದಿರುವುದು. ಪುರುಷ ಮನಸ್ಸಿನ ಅಸ್ಥಿರತೆಯಿಂದಾಗಿ ಹೆಣ್ಣಿನ ಮನಸ್ಸು ಅಪ್ರಾಮಾಣಿಕವಾದುದು ಎಂಬ ನಿಲುವು ಬಂದಿದೆ. ಇದು ಹೆಣ್ಣಿನ ವ್ಯಕ್ತಿತ್ವವನ್ನು ಅಪವ್ಯಾಖ್ಯಾನಗೊಳಿಸುವ ಕ್ರೂರ ಬುದ್ಧಿಯ ರೀತಿ. ಹೆಣ್ಣ ದೇಹದ ಮೇಲಿನ ತಾರತಮ್ಯದಿಂದಾಗಿ ಅನೇಕ ಬಗೆಯ ಸಮಸ್ಯೆಗಳು ಮಾನವ ವಿಕಾಸದ ಪಥದಲ್ಲಿ ಉಂಟಾಗಿವೆ. ಅವುಗಳನ್ನು ಹೀಗೆ ಪಟ್ಟಿ ಮಾಡಬಹುದು.

★ ಹೆಣ್ಣು ಗಂಡಿನ ಲಿಂಗ ತಾರತಮ್ಯದಿಂದಾಗಿ ಮಾನವ ಸಂಬಂಧದ ಸಹಜ ವಿಕಾಸಕ್ಕೆ ತೊಡಕು ಉಂಟಾಗಿದೆ.

★ ವಿಕಾಸ ಪ್ರಕ್ರಿಯೆಯಲ್ಲಿ ಆಕ್ರಮಣಶೀಲ ಪ್ರವೃತ್ತಿಯು ಅಪಾಯಕಾರಿಯಾದುದು. ಇದು ಗಂಡು ಜೀವಿಯ ಅಸ್ತಿತ್ವಕ್ಕೆ ಭವಿಷ್ಯದಲ್ಲಿ ಮುಳುವಾಗಬಲ್ಲದು.

★ ಏಕಮುಖವಾದ ಆಳುವ ಮನೋಭಾವನೆಯು ಲಿಂಗ ಸಂಬಂಧಗಳಲ್ಲಿ ನಿರಂತರವಾದ ಅಂತರಗಳನ್ನ ಬೆಳೆಸುತ್ತದೆ. ಇದರಿಂದಾಗಿ ಹೆಣ್ಣಿನ ಸೃಷ್ಟಿಶೀಲ ಪ್ರವೃತ್ತಿಗೆ ಹಿನ್ನಡೆ ಉಂಟಾಗುತ್ತದೆ.

★ ಹುಟ್ಟಲಿರುವ ಮುಂದಿನ ಪೀಳಿಗೆಯ ಲೈಂಗಿಕ ಸಂಬಂಧಗಳು ಅಸಹಜಗೊಳ್ಳುವ ಅಪಾಯವೂ ಲಿಂಗ ತಾರತಮ್ಯದಿಂದ ಉಂಟಾಗುವ ಸಾಧ್ಯತೆಗಳಿವೆ.

★ ಕೌಟುಂಬಿಕ ವ್ಯವಸ್ಥೆಯೇ ಮುರಿದುಬೀಳುವ ಅವಕಾಶಗಳಿವೆ.

★ ಪುರುಷ ಪ್ರಭುತ್ವವು ಲಿಂಗ ತಾರತಮ್ಯದ ಮೂಲಕ ಜ್ಞಾನ ಪರಂಪರೆಗಳನ್ನು ಏಕಾಕೃತಿಯ ಮೂಲಕ ವಕ್ರಗೊಳಿಸಬಲ್ಲದು.

★ ಸಂಸ್ಕೃತಿ ವಿನಾಶಕ್ಕೆ ತೊಡಗಿ ಧರ್ಮ ಪ್ರಭುತ್ವದ ಕಡೆಗೆ ಪುರುಷ ಪಾರಮ್ಯವು ಈಗಾಗಲೇ ನಡೆದಿದ್ದು ಲಿಂಗ ತಾರತಮ್ಯದಿಂದ ಇಂತಹ ಅನೈತಿಕ ಬೆಳವಣಿಗೆ ಮತ್ತಷ್ಟು ಹೆಚ್ಚಬಲ್ಲುದು.

★ ಜೈವಿಕವಾದ ಗುಣಗಳು ಪುರುಷ ಪೂರ್ವಾಗ್ರಹದಿಂದ ಹೆಣ್ಣಿನಲ್ಲಿ ಸಂಕುಚಿತಗೊಳ್ಳಬಲ್ಲವು.

★ ಸಾಮಾಜಿಕವಾದ ಅಪನಂಬಿಕೆಗಳು ಬೆಳೆದು ಹೆಣ್ಣು ಗಂಡಿನ ಸಾವಯವ ಸಂಬಂಧ ದೂರವಾಗಬಲ್ಲದು.

★ ಹೆಣ್ಣನ್ನು ಲಿಂಗಬೇಧದ ದ್ವೇಷದಿಂದ ವಿಪರೀತವಾಗಿ ಲೈಂಗಿಕ ಮಾರುಕಟ್ಟೆಗೆ ಈಡುಮಾಡುವ ಕ್ರೂರ ನೆಲೆಗಳು ಮತ್ತಷ್ಟು ಪ್ರಬಲವಾಗಬಲ್ಲವು.

★ ಲಿಂಗ ಶೋಷಣೆಯಿಂದ ಮಾರಕವಾದ ಮತ್ತು ಮಾನವ ಕುಲವೇ ನಾಶವಾಗಬಲ್ಲಂತಹ ರೋಗಗಳು ಕಾಣಿಸಿಕೊಳ್ಳಬಲ್ಲವು. ಈಗಾಗಲೇ ಅಂತಹ ಲೈಂಗಿಕ ರೋಗಗಳ ಪಿಡುಗು ಜಗತ್ತಿನಾದ್ಯಂತ ಹಬ್ಬುತ್ತಿದೆ.

★ ಲೈಂಗಿಕ ಶೋಷಣೆಯಿಂದ ಸ್ವತಃ ಪುರುಷನೇ ಮೃಗವಾಗುವ ಹಾಗೂ ತನ್ನ ಸಹಜ ಜೈವಿಕ

ಸಂಬಂಧಗಳಿಂದ ದೂರ ಸಾಗುವ ಆಪತ್ತಿಗೆ ಒಳಗಾಗಬಲ್ಲ. ಇದರಿಂದಾಗಿ ನಿಸರ್ಗ ಜೈವಿಕ ಬೆಸುಗೆಯೇ ತುಂಡಾಗುವ ಅಪಾಯವಿದೆ.

★ ನೈತಿಕವಾದ ಮಾನವೀಯ ಮೌಲ್ಯಗಳು ಲಿಂಗಭೇದದಿಂದ ಕುಸಿಯತೊಡಗುತ್ತವೆ. ನೀತಿಯಿಲ್ಲದ ಸಂಬಂಧಗಳು ಅನೇಕ ಬಗೆಯ ಅನ್ಯಾಯಗಳಿಗೆ ದಾರಿ ಮಾಡುತ್ತವೆ.

★ ವಂಚನೆ, ವಿಕೃತಿ, ಹತ್ಯೆ, ಹಲ್ಲೆ ಅತ್ಯಾಚಾರ, ಮೋಸ, ವಿಶ್ವಾಸಘಾತುಕತೆ ಮುಂತಾದ ಅಪ್ರಾಮಾಣಿಕ ಹಾಗೂ ಮಾನವ ದ್ವೇಷಿ ಗುಣಗಳು ಲಿಂಗ ತಾರತಮ್ಯದಿಂದ ಉಂಟಾಗುತ್ತವೆ.

★ ಭಾಷೆ, ಸಂಸ್ಕೃತಿ, ಸಾಹಿತ್ಯ, ನಾಗರೀಕತೆ, ತಂತ್ರಜ್ಞಾನ, ವಿಜ್ಞಾನಗಳು ಕೂಡ ಪುರುಷ ರೂಪಿಯಾಗಿ ಲಿಂಗ ತಾರತಮ್ಯವನ್ನು ಅನುಸರಿಸಿ ಸಾಮಾಜಿಕವಾದ ಅಸಮತೋಲನಕ್ಕೂ ಎಡೆಮಾಡಿ ಮನುಷ್ಯ ಸಾಧ್ಯತೆಯೇ ಮಿತಿಗೊಳಗಾಗುವ ಅಪಾಯವಿದೆ.

★ ಲಿಂಗ ತಾರತಮ್ಯವು ಹೀಗೆ ಮುಂದುವರಿದರೆ ಭವಿಷ್ಯದ ವಿಕಾಸ ಪ್ರಕ್ರಿಯೆಯ ಗತಿಯಲ್ಲಿ ಜೈವಿಕವಾದ ಅನೇಕ ಬಗೆಯ ವಿಕೃತ ರೂಪಗಳು ಬೆಳೆಯಬಲ್ಲವು.

ಹೀಗೆ ಅನೇಕ ಸವಾಲುಗಳು ಲಿಂಗ ತಾರತಮ್ಯದಿಂದ ಭವಿಷ್ಯದ ಸಮಾಜದಲ್ಲಿ ಎದುರಾಗಬಲ್ಲವು. ಅನೈತಿಕ ಜೈವಿಕ ಸ್ಥಿತಿಯ ನಿರ್ಮಾಣಕ್ಕೆ ಪುರುಷ ನಿಷ್ಠ ಸಮಾಜವು ಮುಂದಾಗುತ್ತಲೇ ಬಂದಿರುವುದು ವಿಪರ್ಯಾಸ, ಯಾವುದೆ ಜೀವಿಯು ಬದುಕುಳಿಯಬೇಕಾದರೆ ಸಮಾನ ಲೈಂಗಿಕ ಹಾಗೂ ಲಿಂಗ ಸಮಾನತೆ ಮುಖ್ಯ. ಸೃಷ್ಟಿ ಸಾಧ್ಯತೆಯ ಮೇಲೆಯೇ ಆಕ್ರಮಣ ಮಾಡುವಂತಹ ಮೃಗೀಯ ಲಿಂಗ ತಾರತಮ್ಯವು ಹೆಣ್ಣಿನ ಭಾವ ಜಗತ್ತಿನ ಜೊತೆ ಅನಿವಾರ್ಯವಾಗಿ ಬದುಕುಳಿಯಲು ಬೇಕಾದ ಮಾನವ ಒಪ್ಪಂದಗಳನ್ನು ಮಾಡಿಕೊಳ್ಳಬೇಕಾಗಿದೆ. ಅಂತಹ ಸಂಬಂಧಗಳನ್ನು ಕಲೆ, ಸಾಹಿತ್ಯ, ಸಂಗೀತ, ನೃತ್ಯ ಮುಂತಾದ ಅಭಿವ್ಯಕ್ತಿ ಸಾಧ್ಯತೆಗಳಲ್ಲಿ ಪ್ರಕೃತಿ ಮತ್ತು ಪುರುಷ ರೂಪಿಯಾಗಿ ಆಕೃತಿಗೊಂಡಿರುವುದನ್ನು ಗಮನಿಸಿದಾಗ ಆಶಾಭಾವನೆ ಉಂಟಾಗುತ್ತದೆ. ಈ ಬಗೆಯ ಅಮೂಲ್ಯ ಗುಣವನ್ನು ಗಾಢವಾಗಿ ವಿಸ್ತರಿಸಿ ಜೀವನದಲ್ಲಿ ಅಳವಡಿಸಿಕೊಳ್ಳುವ ಸಾಮಾಜಿಕ, ಸಾಂಸ್ಕೃತಿಕ, ಜೈವಿಕ ಪರಿಸರ ಉಂಟಾಗಬೇಕು. ಆಗ ಮಾತ್ರ ಲಿಂಗ ತಾರತಮ್ಯದ ಅಪಾಯಗಳಿಂದ ಪಾರಾಗಲು ಸಾಧ್ಯ.

ಸ್ವತಃ ತನ್ನ ದೈಹಿಕ ಹಾಗೂ ಜೈವಿಕ ಕಾರಣದಿಂದಲೇ ಹೆಣ್ಣಿಗೆ ಅನೇಕ ಬಗೆಯ ಸಕಾರಾತ್ಮಕ ಗುಣಗಳು ದತ್ತಕವಾಗಿ ಬಂದಿವೆ. ಇಂತಹ ನೈಸರ್ಗಿಕ ಗುಣಗಳನ್ನು ತಾರತಮ್ಯಕ್ಕೆ ಒಳಪಡಿಸಬೇಕಾದುದಿಲ್ಲ. ಇಷ್ಟೆಲ್ಲಾ ಬಗೆಯ ಅಸಮಾನತೆಯ ಹಿಂಸೆಯನ್ನು ಸಹಿಸುವ ಸ್ತ್ರೀ ಸಮುದಾಯದ ಭಾಗವಾಗಿಯೆ ಪುರುಷ ಸಮಾಜ ಬದುಕುಳಿಯಬೇಕಾಗಿದೆ. ಆ ಬಗೆಯ ಅಸ್ತಿತ್ವಕ್ಕೆ ಬೇಕಾದ ತಿಳುವಳಿಕೆಯನ್ನು ಸಂಸ್ಕೃತಿಗಳು ನಾಗರಿಕತೆಯ ಹಾದಿಯಲ್ಲಿ ಕಂಡುಕೊಳ್ಳುತ್ತಾ ಬಂದಿವೆ. ಆದರೆ ಪ್ರಾಚೀನ ಕಾಲದಿಂದಲೂ ಲಿಂಗ ತಾರತಮ್ಯದ ಜೊತೆಗೇ ಬೆಳೆದು ಬಂದ ಇನ್ನೊಂದು ಅನಿಷ್ಟಪದ್ಧತಿಯಾದ ಜಾತಿ ವ್ಯವಸ್ಥೆಯೂ ಕೆಳಜಾತಿ ಹೆಣ್ಣುಗಳಿಗೆ ಘೋರವಾದ ಅನ್ಯಾಯವನ್ನು ಎಸಗಿದೆ. ಲಿಂಗ ತಾರತಮ್ಯ ಮತ್ತು ಜಾತಿ ಬೇಧದ ಎರಡಲುಗಿನ ಕತ್ತಿಯ ಏಟಿಗೆ ಒಳಗಾದ ದಲಿತ ಮಹಿಳೆಯರ ಸ್ಥಿತಿಯನ್ನು 'ಜಾತಿ' ಶಾಪದ ಮೂಲಕ ಮುಂದಿನ ಅಧ್ಯಾಯಯಲ್ಲಿ ಚರ್ಚಿಸೋಣ.

# ಹೆಣ್ಣ ದೇಹದ ಮೇಲಿನ ಜಾತಿ ಶಾಪ

## (ಬೆತ್ತಲೆ ಪೂಜೆಯ ಹಿನ್ನೆಲೆಯಲ್ಲಿ)

ಲಿಂಗತಾರ್ಯತಮ್ಯಕ್ಕಿಂತಲೂ ಕ್ರೂರವಾದದ್ದು ಜಾತಿ ವ್ಯವಸ್ಥೆ. ವರ್ಣಾಶ್ರಮ ಪದ್ಧತಿಯು ಮೂಲತಃ ಪುರುಷ ಪ್ರಭುತ್ವದ ಸೃಷ್ಠಿ ಮಾತೃ ಪ್ರಧಾನ ಜೀವನ ಕ್ರಮದಲ್ಲಿ ಜಾತಿಯ ಶ್ರೇಣಿಗಳು ಇರಲಿಲ್ಲ. ಲಿಂಗ ಸಂಬಂಧದ ಸಮಪಾತಳಿಯ ಅದರಲ್ಲಿ ಅಡಿಪಾಯವಾಗಿದ್ದುದು. ಮಾತೃತ್ವದ ಕಲ್ಪನೆಯಲ್ಲಿ ಜನಾಂಗೀಯ ಬೇಧ ಇರಲಿಲ್ಲ. ವರ್ಗ ವ್ಯವಸ್ಥೆಯು ಮಾತೃ ನೆಲೆಯ ಜೀವನ ಕ್ರಮಕ್ಕೆ ಬೇಕಾಗಿರಲಿಲ್ಲ. ನಿಸರ್ಗದಲ್ಲಿ ಹೇಗೆ ಒಂದೊಂದು ಜೀವರಾಶಿಯು ಅದರದೇ ಆದ ಅಸ್ತಿತ್ವ ಹಾಗೂ ಅವಕಾಶಗಳಿವೆಯೊ ಅದರಂತೆ ಮಾತೃತ್ವದ ಭಾವನೆ ಅನ್ವಯವಾಗಿತ್ತು. ಕೂಡಿ ಬಾಳುವ ಸಮಷ್ಟೀ ಜೀವನ ವಿಧಾನವೆ ಅಂತಿಮವಾಗಿತ್ತು. ನಿಸರ್ಗದ ಆರಾಧನೆಗೆ ಇಂತಹ ಮನಸ್ಥಿತಿ ತಕ್ಕುದಾಗಿತ್ತು. ಕೃಷಿಪೂರ್ವ ಜೀವನಕ್ರಮದಲ್ಲಿ ಸಮೂದಾಯದ ಭಾವನೆ ದೊಡ್ಡದೆನಿಸತು. ಆದ್ದರಿಂದಲೆ ಕುಟುಂಬ ಕೂಡ ಸಮೂದಾಯದ ಬಿಡಿಯಾದ ಘಟಕವೇ ಆಗಿತ್ತು ಎಲ್ಲ ಬಗೆಯ ರಕ್ತ ಸಂಬಂಧವು ಸಮೂದಾಯದ ಬಳ್ಳಿಯಾಗಿ ಅವರ ಜೀವನ ಕ್ರಮಕ್ಕೆ ಅಬ್ಬಿಕೊಂಡಿದ್ದವು. ಈ ಬಗೆಯ ಜೀವನದಲ್ಲಿ ಜಾತಿ ಮತ್ತು ಲಿಂಗ ತಾರತಮ್ಯಗಳು ಆಳದಲ್ಲಿ ಆಗತಾನೆ ಹೊರ ಮೂಡಿಬರಲು ಸಿದ್ಧತೆ ಮಾಡಿಕೊಳ್ಳುತ್ತಿದ್ದವೇನೋ. ಪುರುಷನ ಮನಸ್ಸಿನ ಆಳದ ಭಾವನೆಗಳು ತುಂಬ ನಿಗೂಢ. ಹೆಣ್ಣಿನ ಮನಸ್ಸು ಗಂಡಿನ ಮನಸ್ಸು ಎಂಬ ವ್ಯತ್ಯಾಸವಿರುವುದನ್ನು ಇವರಿಬ್ಬರ ಜೀವನ ವಿಧಾನ ಮತ್ತು ಆಲೋಚನ ಕ್ರಮದಲ್ಲಿ ಗುರುತಿಸಿಕೊಳ್ಳಬಹುದು. ಜೈವಿಕವಾದ ಹಿನ್ನೆಲೆ ಕೂಡ ಭಿನ್ನ ಲಿಂಗದಂತೆಯೆ ಭಿನ್ನ ಮನಸ್ಥಿತಿಯನ್ನು ನಿರ್ಮಿಸುತ್ತದೆ. ಆದರೆ ಜಾತಿ ವ್ಯವಸ್ಥೆಯ ಮೂಲಕ ಆಘಾತಕ್ಕೀಡಾಗುವ ಮನಸ್ಸು ಇವರೆಡೂ ಮನಸ್ಸಿನ ಸ್ಥಿತಿಗಿಂತ ಭಿನ್ನ. ಕೆಳ ಜಾತಿಯೆಂಬ ಶಾಪಕ್ಕೆ ಒಳಗಾದ ಮಹಿಳೆಯ ಮನಸ್ಸಿನ ರೀತಿ ಅನೇಕ ರೀತಿಯಲ್ಲಿ ಮೇಲು ಜಾತಿಯ ಹೆಣ್ಣಿನ ಮನಸ್ಥಿತಿಗಿಂತ ವಿಭಿನ್ನ. ಗಂಡಸಿನ ಹಲ್ಲೆಯನ್ನು ಮೇಲು ಜಾತಿ ಮಹಿಳೆ ಎದುರಿಸಿದರೆ ಕೆಳ ಜಾತಿಯ ಮಹಿಳೆ ತನ್ನ ಜಾತಿಯ ಗಂಡಸಿನ ಹಲ್ಲೆಯ ಜೊತೆಗೆ ಎಲ್ಲಾ ಮೇಲು ಜಾತಿಗಳ ಸ್ತ್ರೀ ಪುರುಷರ ಮೂಲಕ ಮಾನಸಿಕ ದೈಹಿಕ ಹಲ್ಲೆಗಳಿಗೆ ಒಳಪಡುವಳು. ಹಿಂದು ಧರ್ಮದ ಪ್ರಕಾರ ಕೆಳ ಜಾತಿಗಳು ಮನುಷ್ಯರೇ ಅಲ್ಲ, ಅವರು ಪ್ರಾಣಿಗಳಿಗೆ ಸಮನಾದವರು ಎಂದು ಹೇಳಿ ದಂಡಿಸಿದ್ದ ಹಳೆಯ ಕಂದಾಚಾರ ಈಗ ಬದಲಾಗಿದ್ದರೂ ಅದರ ಪ್ರಭಾವವು ಬೇರೆ ಬೇರೆ ರೂಪಗಳಲ್ಲಿ ಈಗಲೂ ಕ್ರಿಯಾಶೀಲವಾಗಿರುವುದನ್ನು ಉಪೇಕ್ಷಿಸಲಾಗದು. ಈ ಹಿನ್ನಲೆಯಲ್ಲಿ ಜಾತಿ ವ್ಯವಸ್ಥೆಯು ಹೇಗೆ ಕೆಳಜಾತಿ ಹೆಣ್ಣು ಮಕ್ಕಳನ್ನು ದುರುಪಯೋಗ ಪಡಿಸಿಕೊಂಡಿದೆ ಎಂಬುದನ್ನು 'ಬೆತ್ತಲೆ ಸೇವೆ' ಯಂತಹ ಅಮಾನುಷ ಆಚರಣೆಯನ್ನು ಒಂದು ಮುಖ್ಯ ಉದಾಹರಣೆಯನ್ನಾಗಿ ಇಟ್ಟುಕೊಂಡು ಪರಿಶೀಲಿಸಬಹುದು.

ಬೆತ್ತಲೆ ಪೂಜೆ ಆದಿಮ ಯುಗದ ಒಂದು ಆಚರಣೆಯಾಗಿತ್ತು. ಮೇಲೆ ಪ್ರಸ್ತಾಪಿಸಿದಂತೆ ಆದಿಮ ಮಾತೃ ಪರಂಪರೆಯಲ್ಲಿ ಬೆತ್ತಲೆಯು ಫಲವಂತಿಕೆಯ ಆಚರಣೆ ಮಾತ್ರ ಆಗಿದ್ದು ಅದಕ್ಕೆ ಜಾತಿ ಮತ್ತು ಲಿಂಗಬೇಧದ ಅಂತರವಿರಲಿಲ್ಲ. ಪಿತೃ ಪ್ರಧಾನ ಸಮಾಜ ಅಧಿಕಾರ ಬದ್ಧವಾದ ನಂತರವೆ ಖಾಸಗಿ ಆಸ್ತಿಯ ಕಲ್ಪನೆ ದಾಹವಾಗಿ ಬೆಳೆದು ಮನುಷ್ಯದ ವೃತ್ತಿಯನ್ನು ಅವರ ಜೀವನ ಕ್ರಮವನ್ನು ಜಾತಿ ಶ್ರೇಣಿಯಲ್ಲಿ ವಿಭಜಿಸಿ ಮೇಲು ಕೀಳಿನ

ಭೇದಗಳನ್ನು ಸೃಷ್ಟಿಸಲಾಯಿತು. ವಿಶೇಷವಾಗಿ ಸೋತು ಕೀಳೆಂಬ ಪಟ್ಟಕ್ಕೆ ಒಳಪಟ್ಟ ಹೆಣ್ಣುಗಳನ್ನು ಪುರುಷ ಗರ್ವದ ಜಾತಿ ಮತ್ತು ಧರ್ಮಗಳೆರೆಡು ಒಟ್ಟಾಗಿ ಹಿಂಸಿಸಿದವು. ಮೇಲು ಜಾತಿಯ ಪುರುಷ ಮನಸ್ಸು ಕ್ರೂರವಾಗಿ ಕೆಳಜಾತಿ ಮಹಿಳೆರ ಮೇಲೆ ದೈಹಿಕ ಮಾನಸಿಕ ಹಲ್ಲೆ ನಡೆಸಿತು. ಈ ಹಲ್ಲೆ ಅತ್ಯಾಚಾರವನ್ನು ದೇವರ ಹೆಸರಲ್ಲಿ ಧರ್ಮದ ಅಂಗೀಕಾರದಲ್ಲಿ ಎಸಗಲು ಮುಂದಾದದ್ದು ನಾಗರೀಕತೆಗಳ ಹಂತದಿಂದ. ನಾಗರೀಕತೆಗಳು ಜಾತಿ, ವರ್ಗ, ಲಿಂಗ ತಾರತಮ್ಯಗಳನ್ನು ಕ್ರೂರವಾಗಿ ರೂಪಿಸಿಗೊಂಡು ಸಾಮ್ರಾಜ್ಯ ಹಾಗೂ ಧರ್ಮಗಳ ಬೆಂಬಲವನ್ನು ಪಡೆದುಕೊಂಡವು. ಜಗತ್ತಿನಾದ್ಯಂತ ಲಿಂಗ ಶೋಷಣೆಗೆ ಅವಕಾಶ ಮಾಡಿಕೊಡುವಂತಹ ಆಚರಣೆಗಳನ್ನು ಪಾಲಿಸಿಕೊಂಡು ಬರಲಾಗಿದೆ.

ಕರ್ನಾಟಕದ ಸಂದರ್ಭದಲ್ಲಿ ಲಿಂಗ ಶೋಷಣೆಗೆ ಸಾಕ್ಷಿ ಒದಗಿಸುವ ನೂರಾರು ಆಚರಣೆಗಳು ಸಂಸ್ಕೃತಿ ಹೆಸರಿನಲ್ಲಿ ದಟ್ಟವಾಗಿ ಚಾಚಿಕೊಂಡಿವೆ. ಬೆತ್ತಲೆ ಪೂಜೆ, ದೇವದಾಸಿ ಪದ್ಧತಿ, ವೇಶ್ಯವಾಟಿಕೆ, ಬಸವಿ ಬಿಡುವ ರೂಢಿಯಂತಹ ಸಂಗತಿಗಳನ್ನು ಜಾತಿ ಹಿನ್ನೆಲೆಯಲ್ಲಿಯು ಲಿಂಗ ಶೋಷಣೆಯ ಹಿನ್ನೆಲೆಯಲ್ಲೂ ಹಾಗು ಲೈಂಗಿಕ ಹಿಂಸೆಯ ರೀತಿಯಲ್ಲು ವಿಶ್ಲೇಷಿಸಬಹುದು. ಈ ಅಧ್ಯಯನದಲ್ಲಿ ಮುಖ್ಯವಾಗಿ ಹೇಗೆ ಕೆಳಜಾತಿ ಹೆಣ್ಣುಮಕ್ಕಳ ಮೇಲೆ ಇಂತಹ ಪದ್ಧತಿಗಳು ಕತ್ತಿ ಜಳಪಿಸಿವೆ ಎಂದು ನೋಡಲಾಗುವುದು. ಕರ್ನಾಟಕದ ಸಾಂಸ್ಕೃತಿಕ ಚರಿತ್ರೆಯಲ್ಲಿ ಎಲ್ಲಮ್ಮನ ಇತಿಹಾಸವು ಸ್ತ್ರೀಯರ ಮೇಲಿನ ಹಲ್ಲೆಯನ್ನು ಪರೋಕ್ಷವಾಗಿ ಧ್ವನಿಸುತ್ತದೆ. ಹಾಗೆಯೇ ಪುರುಷರ ಸಾಂಸ್ಕೃತಿಕ, ಧಾರ್ಮಿಕ ರಾಜಕಾರಣದ ಹುನ್ನಾರವನ್ನು ಬಿಂಬಿಸುತ್ತದೆ. ಬೆತ್ತಲೆ ಪೂಜೆಯ ಮೂಲಕ ಜಾತಿ ಹಾಗು ಪುರುಷ ಪ್ರಭುತ್ವಗಳೆರಡೂ ಲೈಂಗಿಕ ಶೋಷಣೆಗೆ ತೊಡುಗುತ್ತವೆ.

ಇಂತಹ ಅಮಾನುಷ ಬೆತ್ತಲೆ ಆಚರಣೆಗೆ ಸಂಬಂಧಿಸಿದಂತೆ ಬೃಹತ್ ಪ್ರಮಾಣದಲ್ಲಿ ದಲಿತ ಸಂಘರ್ಷ ಸಮಿತಿಯ ಮೂಲಕ ಪ್ರತಿಭಟನ ಚಳುವಳಿಯೂ ಆಗಿ ಅದು ಅನೇಕ ಸಮಸ್ಯೆಗಳಿಗೆ ಸಿಲುಕಿ ಹೋರಾಟದ ಒಂದು ಹಂತವನ್ನು ಮುಗಿಸಿದೆ. ಲಿಂಗ ಹಾಗೂ ಜಾತಿ ತಾರತಮ್ಯದ ವಿರುದ್ಧದ ಹೋರಾಟಗಳು ಎಷ್ಟು ಬಂದರು ಅವನ್ನು ದಮನ ಮಾಡುವ ಆಳುವ ಪುರುಷ ವ್ಯವಸ್ಥೆಯು ನಮ್ಮ ಜೊತೆಯಲ್ಲೇ ಇದೆ. ಈ ಹಿನ್ನೆಲೆಗಳನ್ನು ಗಮನದಲ್ಲಿ ಇಟ್ಟುಕೊಂಡು ಹೇಗೆ ಈ ಪದ್ಧತಿಯು ನಡೆದು ಬಂದಿದೆ ಎಂಬುದರ ವಿವರಗಳ ಮೂಲಕ ವಿಶ್ಲೇಷಿಸಬಹುದಾಗಿದೆ.

'ಬೆತ್ತಲೆ ಸೇವೆ' ಎಂದರೆ ''ದೇವರಿಗಾಗಿ ತನ್ನ ದೇಹವನ್ನು ಬೆತ್ತಲೆಯಾಗಿ ಅರ್ಪಿಸುವುದೇ ಬೆತ್ತಲೆ ಸೇವೆ''.. 'ಬೆತ್ತಲೆ' ಎಂಬ ಪದಕ್ಕೆ ನಿರ್ವಾಣ ಸ್ಥಿತಿ, ನಗ್ನ ಸ್ಥಿತಿ ಎಂಬ ಅರ್ಥಗಳು ಬರುತ್ತದೆ.

ಬೆತ್ತಲೆ ಪೂಜೆ ಇದೊಂದು ಸಂಸ್ಕೃತಿ ಹೆಸರಿನ ಒಂದು ಧಾರ್ಮಿಕ ಶಾಪವಿದ್ದಂತೆ. ಹೆಣ್ಣಿನ ಮೇಲೆ ಗಂಡು ಸ್ಥಾಪಿಸಿಕೊಂಡ ಪ್ರಭುತ್ವದ ಕೌರ್ಯಕ್ಕೆ ಇದೊಂದು ಜೀವಂತ ಸಾಕ್ಷಿ. ಇನ್ನೂ ಲೈಂಗಿಕ ಶೋಷಣೆಯಂತು ಬೆತ್ತಲೆ ಸೇವೆಯ ಹೆಸರಲ್ಲಿ ನಡೆಯುವ ಧಾರ್ಮಿಕ ಅತ್ಯಾಚಾರ. ಇಂತಹ ಒಂದು ಪದ್ಧತಿಯು ಬೇರೆ ಬೇರೆ ಭಾಗಗಳಲ್ಲಿ ಕರ್ನಾಟಕದ ಅನೇಕ ಕಡೆಗಳಲ್ಲಿ ಹಿಂದಿನಿಂದಲೂ ನಡೆದು ಬಂದಿರುವುದಕ್ಕೆ ಜನಪದ ಪರಂಪರೆಯಲ್ಲಿ ಅಪಾರ ಸಾಕ್ಷ್ಯವಿದೆ. ದೇವದಾಸಿ ಪದ್ಧತಿ, ವೇಶ್ಯಾಪದ್ಧತಿಯಂತಹ ಅಮಾನುಷ ಪದ್ಧತಿಗಳು ಬೆತ್ತಲೆಯ ಪೂಜೆಯ ಕ್ರಮಕ್ಕೆ

ಪೂರಕವಾಗಿಯೆ ಸಾಗಿಬಂದಿವೆ. ಇಂತಹ ಅನಿಷ್ಠ ಪರಂಪರೆಗಳು ಮುಗ್ಧ ಮಹಿಳೆಯರ ಮೇಲೆ ನಿರಂತರವಾಗಿ ಆಕ್ರಮಣ ಮಾಡಿತ್ತಿರುವುದು ವಿಷಾಧನೀಯ.

ಕರ್ನಾಟಕದ ಶಿವಮೊಗ್ಗ ಜಿಲ್ಲೆಯ ಸೊರಬ ತಾಲ್ಲೂಕಿನ ಚಂದ್ರಗುತ್ತಿಯು ಇಂತಹ ಹೇಯ ಆಚರಣೆಗೆ ಪ್ರಸಿದ್ಧಿಯಾದ ಸ್ಥಳ. ಎಲ್ಲಮ್ಮ ತಾಯಿಯ ಹೆಸರಿನಲ್ಲಿ ಪ್ರತಿ ವರ್ಷ ವರದಾ ನದಿಯ ದಂಡೆಯಿಂದ ಚಂದ್ರಗುತ್ತಿ ದೇವಾಲಯದ ತನಕ ಬೆತ್ತಲೆ ಪೂಜೆ ಮಾಡುತ್ತ ಹರಕೆ ಒಪ್ಪಿಸುವ ಈ ಆಚರಣೆಯು ನಾಗರೀಕ ಜಗತ್ತು ತಲೆ ತಗ್ಗಿಸುವಂತೆ ನಡೆಯುತ್ತದೆ. ದೇವರ ಹೆಸರಲ್ಲಿ ಬೆತ್ತಲಾಗುವುದು, ಆ ಬೆತ್ತಲೆ ತನವನ್ನು ಭಕ್ತ ಸಮೂಹ ಹುಚ್ಚಾಗಿ ಆಚರಿಸುವುದು ಹಾಗೆಯೆ ಅಂತಹ ಬೆತ್ತಲೆ ಸ್ಥಿತಿಯನ್ನು ನೋಡುವ ಸಮೂಹ ಆನಂದಿಸುವುದು ಇವೆಲ್ಲವು ಕ್ರೂರತನದ ಬೇರೆ ಬೇರೆ ಮುಖಗಳು. ಇವನ್ನೆಲ್ಲ ಸಂಸ್ಕೃತಿ ಎಂದು ಕರೆಯುವುದಾಗಲಿ, ಭಕ್ತಿಯ ಆಚರಣೆಯೆಂದು ಒಪ್ಪುವಾದಲಿ ಹಾಗು ತಮಗೆ ಇದರಿಂದ ಒಳಿತಾಗುವುದೆಂದು ನಂಬುವುದಾಗಲಿ ಶುದ್ಧ ಮೂರ್ಖತನವಾಗುತ್ತದೆ. ಸಂಸ್ಕೃತಿಯ ಹೆಸರಲ್ಲಿ ಮಹಿಳೆಯರನ್ನು ಬೆತ್ತಲೆ ಮಾಡುವುದು ಪುರುಷ ರಾಜಕಾರಣದ ಒಂದು ತಂತ್ರವಷ್ಟೆ ಹಾಗೆಯೆ ಕೆಳ ಜಾತಿ ಹೆಣ್ಣುಮಕ್ಕಳನ್ನು ಭೂಮಾಲೀಕ ಹಾಗೂ ಪುರೋಹಿತ ಶಾಹಿ ವರ್ಗಗಳು ದುರುಪಯೋಗ ಪಡಿಸಿಕೊಳ್ಳಲು ಆಚರಣೆಗಳನ್ನು ಹೇರಿರುತ್ತವೆ. ಈ ಬಗೆಯ ಪೌರಾಣಿಕ ಕಥನವು ಹೇಗೆ ಶೋಷಣೆಗೆ ಪಾವಿತ್ರ್ಯದ ಮೆರಗು ನೀಡಿ ವಂಚಿಸಿದೆ ಎಂಬುದನ್ನು ಈಗ ಗಮನಿಸುವ.

ಗೌತಮ ಮಹರ್ಷಿಗಳ ಆದೇಶದ ಮೇಲೆಗೆ ಕಾಶ್ಮೀರ ಪ್ರದೇಶವನ್ನು ಆಳುತ್ತಿದ್ದ ರೇಣುಕಾಸುರ ಎಂಬ ರಾಜನ ಸಾಕು ಮಗಳೇ ಈ ರೇಣುಕಾದೇವಿ. ಈಕೆ ಬೆತ್ತಲೆ ಸೇವೆಗೆ ಕಾರಣಲಾದ ದೇವತೆ. ರೇಣುಕಾ/ ಗುತ್ತವ್ವ/ ಎಲ್ಲಮ್ಮ ಜಮದಗ್ನಿ ಎಂಬ ಋಷಿಯ ಪತ್ನಿ. ಈ ಜಮದಗ್ನಿಯು ಭೃಗುವಂಶದ ಕುಬೇರ ಮುನಿಯಿಂದ ಕ್ಷತ್ರೀಯ ಗಾದಿ ರಾಜನ ಮಗಳಾದ ಸತ್ಯವತಿಗೆ ಜನಿಸಿದವನು. ರೇಣುಕೆ ಮದುವೆಯ ನಂತರ ನಾರು ಬಟ್ಟೆಯನ್ನುಟ್ಟು ಸರಳ ಜೀವನ ನಡೆಸ ತೊಡಗುತ್ತಾಳೆ. ಈಕೆ ಪ್ರತಿನಿತ್ಯ ಮಲಪ್ರಭಾ ನದಿಯಲ್ಲಿ ಸ್ನಾನ ಮಾಡಿ ಮರಳಿನಿಂದ ಅಥವಾ ಕೆರೆ ಮಣ್ಣಿನಿಂದ ನಿರ್ಮಿತವಾದ ಕೊಡಕ್ಕೆ ಹಾವನ್ನು ಸಿಂಬಿಯನ್ನಾಗಿ ಮಾಡಿಕೊಂಡು ನೀರನ್ನು ತಂದು ಪೂಜೆಗೆ ಸಿದ್ಧಗೊಳಿಸುತ್ತಿದ್ದಳು. ಈ ಮಧ್ಯ ರೇಣುಕಾಗೆ ಐವರು ಮಕ್ಕಳು ಜನಿಸಿ ಅವರಿಗೆ ರಮಣ್ವಂತ, ಸುಷೇಣ, ವಸು, ವಿಶ್ವವಸು, ಪರಶುರಾಮ ಎಂದು ಹೆಸರನ್ನಿಟ್ಟಳು. ಹೀಗೆ ಒಂದು ದಿನ ರೇಣುಕೆ ನಾರುಬಟ್ಟೆಯನ್ನುಟ್ಟು ನೀರನ್ನು ತರಲು ಮಲಪ್ರಭಾ ನದಿಗೆ ಹೋದಾಗ ಅಲ್ಲಿ ತನ್ನ ಮಡದಿಯ ಜೊತೆ ಜಲಕ್ರೀಡೆಯಲ್ಲಿ ಮಗ್ನನಾಗಿದ್ದ ಚಿತ್ರರಥನೆಂಬ ಗಂಧರ್ವನನ್ನು ನೋಡಿ ಮೋಹಗೊಂಡಳು, ಮನಸ್ಸು ಅದರಿಂದ ಚಂಚಲವಾಯಿತು. ಆಗ ಮರಳಿನಿಂದ ನಿರ್ಮಿತವಾದ ಕೊಡ ಕೈಜಾರಿ ಒಡೆದು ಹೋಯಿತು. ಸಿಂಬಿಯನ್ನಾಗಿ ಮಾಡಿಕೊಂಡಿದ್ದ ಹಾವು ಕೂಡ ಹರಿದು ಹೋಯಿತು. ಆದರೆ ಇತ್ತ ಆಶ್ರಮದಲ್ಲಿ ಪೂಜಾ ಸಮಯಕ್ಕೆ ಸರಿಯಾಗಿ ನೀರು ತಾರದ ರೇಣುಕೆ ಮೇಲೆ ಕೋಪಿಷ್ಟನಾದ ಜಮದಗ್ನಿ ಆಕೆಯ ಶೀಲದ ಬಗ್ಗೆ ಸಂಶಯಪಟ್ಟು ಅವಳನ್ನು ಕೊಲ್ಲಲೆಂದು ತನ್ನ ಪುತ್ರ ಚಿ॥ ಪರಶುರಾಮನಿಗೆ ಹೇಳುತ್ತಾನೆ. ತಂದೆಯ ಮಾತಿನಂತೆ ಮಗ ತಾಯಿಯ ಕೊಲೆಗೈಯಲು ಮಗ ಬೆನ್ನು ಹತ್ತಿದಾಗ ರೇಣುಕೆ ಜೀವ ಭಯದಿಂದ ದಿಕ್ಕೆಟ್ಟು ಓಡುವಾಗ ಮೈಮೇಲಿನ ಬಟ್ಟೆ ಮುಳ್ಳುಗಳಿಗೆ ಸಿಕ್ಕಿ ಬೆತ್ತಲಾಗುತ್ತಾಳೆ. ಅಲ್ಲೆ

ಹತ್ತಿರದ ಗುಹೆಯೊಂದರಲ್ಲಿ ಶಿವಲಿಂಗ ತಬ್ಬಿಕೊಂಡು ರಕ್ಷಣೆ ಕೋರುತ್ತಾಳೆ. ಅಂದಿನಿಂದ ಆಕೆಯ ಭಕ್ತರು ಬೆತ್ತಲೆ ಸೇವೆಯ ಮೂಲಕ ದೇವಿಯ ರಕ್ಷಣೆ ಪಡೆಯುತ್ತಿದ್ದಾರೆ. ಇಂತಹ ನಂಬಿಕೆಯಿಂದಲೇ ಭಕ್ತಾದಿಗಳು ಬೆತ್ತಲೆಯಾಗಿ ತಮ್ಮ ಕಷ್ಟ ಕಾರ್ಪಣ್ಯಗಳು ಹೋಗಲೆಂದು ಬೆತ್ತಲೆ ಸೇವೆ ಮಾಡಿ ದೇವಿಯ ಆಶೀರ್ವಾದ ಪಡೆಯುತ್ತಾರಂತೆ!

ಬೆತ್ತಲೆ ಸೇವೆ ಮಾಡುವವರು ಕೆಳವರ್ಗದ ಜನಾಂಗಗಳಾದ ದೀವರು ಮತ್ತು ಹರಿಜನರೇ ಆಗಿರುತ್ತಾರೆ. ಇವರು ದೇವಿಗೆ ಇಂತಹ ಬೆತ್ತಲೆ ಹರಕೆ ಒಪ್ಪಿಸುವಾಗ ಅವರು ಮೊದಲು ವರದಾ ನದಿಯಲ್ಲಿ ಸ್ನಾನ ಮಾಡಿ ಪೂರ್ಣ ಬೆತ್ತಲೆಯಾಗಿ ಕೊರಳಲ್ಲಿ ಮತ್ತು ಸೊಂಟದಲ್ಲಿ ಹೂವಿನ ಹಾರವನ್ನು ತೊಟ್ಟು ಕೊಂಡು, ಕೈಯಲ್ಲಿ ಅಕ್ಕಿ, ಬೇವಿನ ಸೊಪ್ಪುಗಳನ್ನು ಹಿಡಿದು ತುಂಬಾ ಭಕ್ತಿಭಾವದಿಂದ ತಾಯಿಗೆ "ಉಧೋ ಉಧೋ" ಎಂದು ಉದ್ಗರಿಸುತ್ತಾ ವರದಾ ನದಿಯಿಂದ ಎಲ್ಲಮ್ಮ/ರೇಣುಕೆಯ ಬೆಟ್ಟಕ್ಕೆ ಮೂರು ಕಿ.ಮೀಟರ್ ಅಂತರವಿದೆ. ಅಲ್ಲಿಯವರೆಗೂ ಕಾಲು ನಡಿಗೆಯಲ್ಲೇ ಹರಕೆ ಹೊತ್ತವರ ಮೆರವಣಿಗೆ ಸಾಗುತ್ತದೆ. ಕೆಲವರು ಪೂರ್ಣ ಬೆತ್ತಲೆಯಾದರೆ, ಕೆಲವರು ಅರೆಬೆತ್ತಲೆಯಲ್ಲಿ ಅಂದರೆ ಬೇವಿನ ಉಡುಗೆಯ ಮುಖಾಂತರ, ಮತ್ತೆ ಕೆಲವರು ದಿಂಡು ಉರುಳು ಸೇವೆಯನ್ನು ಸಲ್ಲಿಸುತ್ತಾ ದೇವಿಗೆ ಹರಕೆ ಸಲ್ಲಿಸುವರು. ಇಂತಹ ಸೇವೆಯನ್ನು ಗಂಡಸರು ಕೂಡ ಮಾಡುತ್ತಾರಾದರೂ ಶೇಕಡ ತೊಂಬತ್ತು ಭಾಗದಷ್ಟು ಮಹಿಳೆಯರೇ ಈ ಸೇವೆಯನ್ನು ಮಾಡುವಂತದ್ದು. ಇಂತಹ ಒಂದು ಬೆತ್ತಲೆ ಸೇವೆಯೆಂಬ ಕುರುಡು ನಂಬಿಕೆಯಿಂದ ಅಮಾಯಕ ಹೆಣ್ಣು ಮಕ್ಕಳು ಪಟ್ಟಭದ್ರರ ಕೈಗೆ ಸಿಕ್ಕಿ ಅವರ ಕಾಮತೃಷೆಗಾಗಿ, ಅವರ ಮನರಂಜನೆಗಾಗಿ ಇಂತಹ ಹೆಣ್ಣು ಮಕ್ಕಳನ್ನು ಬಳಸಿಕೊಂಡು ಅವರನ್ನು ಶೋಷಿಸುತ್ತಿದ್ದಾರೆ.

"ಬೆತ್ತಲೆ ಮೆರವಣಿಗೆಯನ್ನು ಸಾಗುವವರಲ್ಲಿ ವಯಸ್ಸಿನ ಅಂತರವೆಂಬುದು ಇರುವುದಿಲ್ಲ. ನಲವತ್ತು ವರ್ಷದ ಮಕ್ಕಳು, ಅರವತ್ತು ವರ್ಷದ ತಾಯಿಯ ನಗ್ನತೆಯನ್ನು 30ವರ್ಷದ ಮಗಳ ನಗ್ನತೆಯನ್ನು ಕಾಣುವ ತಂದೆಯ ಚಿತ್ರ ನಾವು ಇತಿಹಾಸದಲ್ಲಿ ಓದುವ ಕಾಡು ಮನುಷ್ಯರ ಅನಾಗರೀಕ ಬದುಕನ್ನು ನೆನಪಿಗೆ ತರುತ್ತದೆ. ಇವರೆಲ್ಲ ಮನಸ್ ಪೂರ್ವಕವಾಗಿ ಬೆತ್ತಲೆ ಸೇವೆ ಮಾಡುತ್ತಿದ್ದಾರೆ ಎಂದು ನಮಗೆ ಅನಿಸುತ್ತಿರಲಿಲ್ಲ. ಕೆಲವು ಕಡೆ ಬಲವಂತ ಎದ್ದು ಕಾಣುತ್ತಿತ್ತು. ಒಂದು ಕಡೆ ಹೊಸದಾಗಿ ಮದುವೆಯಾದ ದಂಪತಿಗಳು, ಗಂಡ ಹೆಂಡತಿಯನ್ನು ಬಲವಂತ ಪಡಿಸುತ್ತಿದ್ದ ಹೆಂಡತಿ ಒಲ್ಲೆ ಎಂದು ಅಳುತ್ತಿದ್ದಳು ಎಂಬುದಾಗಿ ಲೇಖಕಿ ಇಂದಿರಾ ಕೃಷ್ಣಪ್ಪರವರು ತಮ್ಮ 'ಬಯಲು? ಬೆತ್ತಲೆ! ಚಂದ್ರಗುತ್ತಿ...'ಯಲ್ಲಿ ಹೇಳುತ್ತಾರೆ. ಇದನ್ನು ಗಮನಿಸಿದಾಗ ಜನರಲ್ಲಿ ಇಂತಹ ಧಾರ್ಮಿಕ ಭಯ ಎಷ್ಟು ತೀವ್ರವಾಗಿತ್ತು ಎಂಬುದು ತಿಳಿದು ಬರುತ್ತದೆ.

ಎಲ್ಲಮ್ಮ ದೇವಿಯ ಹೆಸರಿನಲ್ಲಿ ಬೆತ್ತಲೆ ಸೇವೆ ಮಾಡುತ್ತೇನೆಂದು ಭಕ್ತ ಜನರು ಹರಕೆ ಹೊತ್ತು ಹಾಡುಹಗಲೇ ಇಂತಹ ಬೆತ್ತಲೆ ಸೇವೆಯನ್ನು ಮಾಡುತ್ತಿದ್ದರು. ದೇವಿಗೆ ಹರಕೆ ತೀರಿಸುವಾಗ ಯಾರಾದರೂ ನಕ್ಕರೆ, ಅಣಕಿಸಿ ಅಪಹಾಸ್ಯ ಮಾಡಿದರೆ ಅಂತಹವರಿಗೆ ದೇವಿ ಕೊಡಬಾರದ ಕಷ್ಟಗಳನ್ನು ಕೊಡುತ್ತಾಳೆ ಎನ್ನುವ ಧಾರ್ಮಿಕ ಭಯವನ್ನು ಬಹಳ ಹಿಂದಿನಿಂದಲೂ ಜನರ ಮನಸ್ಸಿನಲ್ಲಿ ಬೇರೂರಿಸಿದ್ದಾರೆ. ಕುಟುಂಬದಲ್ಲಿನ ಅನೇಕ ಸಮಸ್ಯೆಗಳ ಪರಿಹಾರಕ್ಕಾಗಿ ಎಲ್ಲಮ್ಮ ತಾಯಿಯ ಬಳಿ ಹರಕೆ ಹೊತ್ತುಕೊಳ್ಳುತ್ತಾರೆ. ಮಗಳಿಗೆ ಮದುವೆಯಾಗದೆ ಇರುವಾಗ, ವ್ಯಾಪಾರದಲ್ಲಿ ನಷ್ಟವುಂಟಾದರೆ, ಗಂಡನಿಗೆ ಕಾಯಿಲೆಯಿಂದ ನರಳುತ್ತಿದ್ದರೆ ನಿವಾರಣೆಗಾಗಿ ದೇವಿಯಲ್ಲಿ ಈ

ರೀತಿಯ ನಾನಾ ಹರಕೆಗಳನ್ನು ಹೊರುತ್ತಿದ್ದರು. ಬೇವಿನ ಉಡುಗೆ, ಉರುಳುಸೇವೆ, ಒದ್ದೆ ಉಡುಗೆ, ದೀಡು ನಮಸ್ಕಾರ, ಸಿಡಿ ಯಾಡುವುದು, ಗಂಧ ಅಥವಾ ಅರಿಶಿನದ ಉಡುಗೆ ಇಂತಹ ನಾನಾರೀತಿಯ ಹರಕೆಗಳಲ್ಲಿ ಬೆತ್ತಲೆ ಸೇವೆಯು ಒಂದು. ಭಕ್ತಾದಿಗಳು ಇಂತಹ ನೂರಾರು ನಂಬಿಕೆಯಿಂದಲೇ ಬೆತ್ತಲೆಯಾಗಿ ದೇವಿಗೆ ಪೂಜೆ ಹರಕೆ ಸಲ್ಲಿಸಿದರೆ ತಮ್ಮ ಕಷ್ಟ ಕಾರ್ಪಣ್ಯ ನಿವಾರಣೆಯಾಗುತ್ತದೆ ಎಂದು ನಂಬಿ ಇಂತಹ ಆಚರಣೆಗಳಿಗೆ ಶರಣಾಗುತ್ತಾರೆ.

"ಬೆತ್ತಲೆ ಸೇವೆ ಸಲ್ಲಿಸುವವರು ಅತಿ ಹೆಚ್ಚಿನ ಸಂಖ್ಯೆಯಲ್ಲಿ ದಲಿತರು ಮತ್ತು ಹಿಂದುಳಿದವರೇ ಆಗಿದ್ದರೂ ಉನ್ನತ ವರ್ಗದವರು ಅಪರೂಪವಾಗಿ ಭಾಗವಹಿಸುವುದುಂಟು. ಇದಕ್ಕೆ ಲಿಂಗ ಭೇದವಿಲ್ಲ, ವಯಸ್ಸಿನ ಅಂತರವಿಲ್ಲ. ಬೆತ್ತಲೆ ಸೇವೆಗೆ ಅಣಿಯಾಗುವುದು ಒಂದು ದಿನ ಪೂರ್ಣ ಉಪವಾಸವಿದ್ದು ಚಂದ್ರಗುತ್ತಿಗೆ ಬರುತ್ತಾರೆ. ದೈಹಿಕ ಸುಖದಿಂದ ದೂರವಿರುತ್ತಾರೆ. ಮುಟ್ಟು ಮೈಲಿಗೆಯಾದವರು ಭಾಗವಹಿಸುವಂತಿಲ್ಲ. ಚರಿತ್ರೆಯ ಪುಟದುದ್ದಕ್ಕೂ ಧರ್ಮ ಸಾಂಸ್ಕೃತಿಕ ರೂಪ ಪಡೆದುಕೊಂಡು ಕೆಳವರ್ಗದವರನ್ನು, ದಲಿತರನ್ನು ಪುರಾಣಗಳ ಹೆಸರಿನಲ್ಲಿ ಶೋಷಣೆ ಮಾಡುತ್ತಲೇ ಬಂದಿದ್ದಾರೆ. ಬೆತ್ತಲೆ ಸೇವೆ ಈ ಶೋಷಣೆಗೆ ಒಂದು ನೆಪವಷ್ಟೇ. ದೇವರು ಧರ್ಮಗಳ ಹೆಸರಲ್ಲಿ ಇಂತಹ ಅನಾಗರೀಕ ಆಚರಣೆ ಈ ನಾಗರಿಕ ಜಗತ್ತಿನಲ್ಲಿ ಜೀವಂತವಾಗಿತ್ತು ಎನ್ನುವುದು ದುರಂತವೇ ಸರಿ" ಎಂಬುದಾಗಿ ಮೋಹನ್ ಚಂದ್ರಗುತ್ತಿ ತಮ್ಮ 'ಚಂದ್ರಗುತ್ತಿ ರೇಣುಕಾಂಬೆ ಜಾತ್ರೆ'ಯಲ್ಲಿ ವ್ಯಕ್ತಪಡಿಸುತ್ತಾರೆ. ಇಂತಹ ಅಮಾನುಷ, ಅಮಾನವೀಯ ಆಚರಣೆಗೆ ಪ್ರೇರಕರು ಮತ್ತು ಪ್ರಚೋದಕರು ಈ ಜೋಗುತಿ ಮತ್ತು ಜೋಗಮ್ಮಗಳೇ ಆಗಿರುತ್ತಾರೆ ಎನ್ನಬಹುದು. ಇಂತಹ ಜೋಗತಿ ಜೋಗಪ್ಪಗಳು ಹಳ್ಳಿಯ ಎಲ್ಲೆಡೆ ಸುತ್ತಾಡಿ ಇಂತಹ ಮುಗ್ಧ ಅಮಾಯಕ ಜನರಲ್ಲಿನ ಅಜ್ಞಾನ ಮತ್ತು ಮಾನಸಿಕ ಸ್ಥಿತಿಯನ್ನು ದುರುಪಯೋಗ ಪಡಿಸಿಕೊಂಡು ಇಂತಹ ಹಲವಾರು ಅನಿಷ್ಠ ಆಚರಣೆಗಳಿಗೆ ಪ್ರಚೋದನೆ ನೀಡುತ್ತಾರೆ. ಮೊದಲು ಇಂತಹ ಜೋಗುತಿಗಳ ನಿರ್ಮೂಲವಾದರೆ ಬೆತ್ತಲೆ ಸೇವೆಯಂತಹ ಅನಿಷ್ಠ ಆಚರಣೆಗಳಿಗೆ ಕಡಿವಾಣ ಹಾಕಬಹುದು.

ಜೋಗುತಿಯರು ಮನೆ ಮನೆಗಳಿಗೆ ಭೇಟಿ ಕೊಟ್ಟಾಗ ಮಕ್ಕಳಿಗೆ ಆಶೀರ್ವಾದ ಮಾಡುವ ನೆಪದಲ್ಲಿ ಯಾವುದೋ ಅಂಟನ್ನು ಹಚ್ಚಿ ತಲೆ ನೇವರಿಸುತ್ತಾರೆ. ಹೀಗೆ ಹಚ್ಚಿದ 7-8 ದಿನಗಳಲ್ಲೇ ಕೂದಲು ಜಡ್ಡುಗಟ್ಟುತ್ತದೆ. ಮುಂದಿನ ಭೇಟಿಯ ವೇಳೆಯಲ್ಲಿ ಮಗುವಿಗೆ 'ಅಮ್ಮ' ಕಾಣಿಸಿಕೊಂಡಿದ್ದಾಳೆ. ಮಗುವಿಗೆ ಕೂದಲನ್ನು ತೆಗೆಯಬಾರದೆಂದು ನಂಬಿಸಿ ದೈವಭೀತಿಯಿಂದ ಅಮಾಯಕ ಜನರು ಇಂತಹ ಪದ್ಧತಿಗೆ ಶರಣಾಗುತ್ತಿದ್ದಾರೆ.

ಜೋಗುತಿತನದ ಪರಂಪರೆಯ ನಿರ್ಮೂಲನೆಗೆ ಇಂದಿರಾ ಕೃಷ್ಣಪ್ಪನವರು ತಮ್ಮ 'ಬಯಲು? ಬೆತ್ತಲೆ! ಚಂದ್ರಗುತ್ತಿ...' ಎಂಬ ಕೃತಿಯಲ್ಲಿ ಹೀಗೆ ಹೇಳುತ್ತಾರೆ.

★ ಸ್ವಂತ ಉದ್ಯೋಗ ಹಾಗೂ ವಸತಿ ಯೋಜನೆಯನ್ನು ರೂಪಿಸಿಕೊಡಬೇಕು.

★ ತಿಂಗಳಿಗೊಮ್ಮೆ ಅಥವಾ ಎರಡು ತಿಂಗಳಿಗೊಮ್ಮೆ ಒಂದು ದಿನವನ್ನು ಗೊತ್ತುಪಡಿಸಿ ಚಂದ್ರಗುತ್ತಿಯಲ್ಲಿ ಸಾಮೂಹಿಕವಾಗಿ ಜೋಗಿತಿಯರ ತಲೆ ಕೂದಲನ್ನು ತೆಗೆಯುವುದು.

★ ತಲೆ ಕೂದಲು ತೆಗೆಸಿಕೊಳ್ಳಲು ಮುಂದೆ ಬರುವ ಪ್ರತಿ ಜೋಗುತಿಗೆ ಆರ್ಥಿಕ ನೆರವು 500 ರೂ. ಅಥವಾ 1,000 ರೂ. ಕೊಡುವ ಬಗ್ಗೆ ಸರಕಾರ ಚಿಂತಿಸಬೇಕು.

★ ಜಡ್ಡುಗಟ್ಟಿದ ತಲೆ ಕೂದಲು ಹೊಂದಿರುವ ಮಕ್ಕಳಿಗೂ ಈ ಯೋಜನೆಯನ್ನು ವಿಸ್ತರಿಸಿ, ಪ್ರತಿಯೊಂದು ಮಗುವಿಗೂ ಆರ್ಥಿಕ ನೆರವು 200 ರೂ. ಅಥವಾ 400 ರೂ. ವನ್ನು ನಿಗದಿ ಪಡಿಸಬೇಕು.

★ ಜಡ್ಡುಗಟ್ಟಿದ ಮಕ್ಕಳ ತಲೆ ಕೂದಲವನ್ನು ತೆಗೆಯುವುದರಿಂದ ಜೋಗಿತಿಯ ಹೊಸ ಪೀಳಿಗೆಯನ್ನು ನಿಯಂತ್ರಿಸಿದಂತಾಗುತ್ತದೆ.

★ ಹಿರಿಯ ಜೋಗಿತಿ ಜೋಗಪ್ಪಗಳಿಗೆ ಆರ್ಥಿಕ ಆಕರ್ಷಣೆಯನ್ನು ಒದಗಿಸಿಕೊಡುವುದು ಅತಿ ಮುಖ್ಯ ಸ್ವತಃ ಜೋತಿಯರೇ ತಮ್ಮ ತಲೆ ಕೂದಲನ್ನು ತೆಗೆಸಲು ಮುಂದೆ ಬಂದಾಗ ಉಳಿದ ಸಾಮಾನ್ಯ ಜನರು ತಮ್ಮ ಮಕ್ಕಳ ಕೂದಲನ್ನು ತೆಗೆಸಲು ವಿರೋಧಿಸಲಾರರು.

ಒಮ್ಮೆ ಜಡ್ಡುಗಟ್ಟಿದ ಕೂದಲನ್ನು ತೆಗಿಸಿದರೆ ನಂತರ ಬೆಳೆಯುವ ಕೂದಲು ಜಡ್ಡು ಗಟ್ಟುವುದಿಲ್ಲ. ಹೀಗೆ ಈಗಿನ ಮತ್ತು ಮುಂದಿನ ಜೋಗಿತಿಗಳ ಪೀಳಿಗೆಗಳನ್ನು ನಿಯಂತ್ರಿಸುವ ಮೂಲಕ ಬೆತ್ತಲೆ ಸೇವೆಯ ಮೂಲವನ್ನೇ ತೊಡೆದು ಹಾಕಲು ಸಾಧ್ಯವೆನಿಸುತ್ತದೆ. ಇದರ ಜೊತೆಯಲ್ಲೆ ಜೋಗಿತಿತನದ ಪರಂಪರೆಗೆ ನಿಷೇಧಾಜ್ಞೆ ಜಾರಿಗೆ ತಂದು ಸಂಪೂರ್ಣವಾಗಿ ಹೋಗಲಾಡಿಸಬೇಕು.

ಬೆತ್ತಲೆ ಸೇವೆ ಚಂದ್ರಗುತ್ತಿಗೆ ಮಾತ್ರ ಸೀಮಿತವಾಗಿರದೆ, ಕರ್ನಾಟಕದ ರಾಯಚೂರು, ಶಿವಮೊಗ್ಗ ತೀರ್ಥಹಳ್ಳಿ, ವಿಜಾಪುರ, ಬೆಳಗಾಂ ಮುಂತಾದ ಜಿಲ್ಲೆಗಳಲ್ಲೂ ವ್ಯಾಪಕಗೊಂಡಿದ್ದು ಇಂದಿಗೂ ಕೂಡ ಇಂತಹ ಅಮಾನುಷ ಪದ್ಧತಿ ಜಾರಿಯಲ್ಲಿದೆ.

ಚಂದ್ರಗುತ್ತಿಯಲ್ಲಿ ನಡೆಯುವ ಬೆತ್ತಲೆ ಸೇವೆಯಲ್ಲಿ ಪಾಲುಗೊಳ್ಳುವವರು ಸಾಮಾನ್ಯವಾಗಿ ಹಿಂದುಳಿದ ವರ್ಗದವರೇ ಆಗಿದ್ದು, ಶೇಕಡ 80 ಭಾಗದಷ್ಟು ಮಹಿಳೆಯರು ಅಜ್ಞಾನ, ಅಂಧಕಾರ, ಅನಕ್ಷರತೆ, ಬಡತನಗಳಿಂದ ಕೂಡಿರುವ ಮಹಿಳೆಯರೇ ಆಗಿರುತ್ತಾರೆ. ಇಂತಹ ಆಚರಣೆಯ ವಿರುದ್ಧ ಮೊದಲಬಾರಿಗೆ ಧ್ವನಿ ಎತ್ತಿದವರು ಪ್ರೊ॥ ಬಿ. ಕೃಷ್ಣಪ್ಪನವರು. 1984ರಲ್ಲಿ ಚಂದ್ರಗುತ್ತಿಗೆ ಬಂದು ಕರುಳರಿಯುವ ಇಲ್ಲಿನ ಅಮಾನುಷ ಆಚರಣೆಯನ್ನು ಕಣ್ಣಾರೆ ಕಂಡು, ಬಹಳವಾಗಿ ನೊಂದು ಇದನ್ನು ಕೊನೆಗಾಣಿಸಲೇಬೇಕೆಂದು ನಿರ್ಧರಿಸಿ ಬೆತ್ತಲೆ ಹರಕೆ ಹೊತ್ತು

ಮೆರವಣಿಗೆ ಹೊರಟಂತಹವರ ಫೋಟೋ ತೆಗೆದು ಲಂಕೇಶ್ ಪತ್ರಿಕೆಯಲ್ಲಿ ಲೇಖನ ಸಹಿತ ಪ್ರಕಟಪಡಿಸಿದಾಗ ವಿಧಾನಸಭೆಯಲ್ಲಿ ಹಾಗೂ ಜನ ಸಮೂದಾಯದಲ್ಲಿ ಬಹುಚರ್ಚಿತವಾದ ವಿಷಯವಾಗಿ ಆಗ ಸರ್ಕಾರ, ಬೆತ್ತಲೆ ಸೇವೆಯನ್ನು ನಿಲ್ಲಿಸುವಂತೆ ಜಿಲ್ಲಾಡಳಿತಕ್ಕೆ ಸೂಚನೆ ನೀಡಿದಾಗ ಜಿಲ್ಲಾಡಳಿತ ಆಗಿನ ದಲಿತ ಸಂಘ, ಪ್ರಗತಿಪರ ಸಂಘಟನೆ ಯೊಡಗೂಡಿ ಬೆತ್ತಲೆ ಸೇವೆ ನಿಲ್ಲಿಸುವ ಕಾರ್ಯ ಯೋಜನೆ ರೂಪಿಸಿತು. ಅದರ ಪ್ರತಿಫಲವೇ 1986ರಲ್ಲಿ ನಡೆದ ಬೆತ್ತಲೆ ಸೇವೆ ನಿಷೇದ ಚಳುವಳಿ.

ಶಿವಮೊಗ್ಗ ಜಿಲ್ಲೆಯಲ್ಲಿರುವ ಚಂದ್ರಗುತ್ತಿಯಿಂದ ಸೊರಬಕ್ಕೆ 16 ಕಿಲೋ ಮೀಟರ್ ಅಂತರದಲ್ಲಿರುವ ಇಲ್ಲಿನ ರೇಣುಕಾದೇವಿಗೆ ಪ್ರತಿನಿತ್ಯ ಶಾಸ್ತ್ರೋಕ್ತವಾಗಿ ಪೂಜೆ ಸಲ್ಲಿಸುತ್ತದೆ. ಪ್ರತಿದಿನ ಮಡಿಯಿಂದ ದೇವಿಗೆ ನೀರಿನಿಂದ ಶುದ್ಧಗೊಳಿಸಿ, ಅಭೀಷೇಕ ಮಾಡಿ, ಹೂವಿನ ಅಲಂಕಾರ ಮಾಡಿ, ಕುಂಕುಮ ಅರ್ಚನೆ, ನೈವೇದ್ಯ, ಮಹಾಮಂಗಳಾರತಿ ಮಾಡಿ ಇಲ್ಲಿನ ಭಕ್ತಾದಿಗಳಿಗೆ ಪ್ರಸಾದ ವಿನಿಯೋಗ ಮಾಡಲಾಗುತ್ತದೆ. ಪ್ರತಿ ಮಂಗಳವಾರ ಹಾಗೂ ಶುಕ್ರವಾರ ವಿಶೇಷ ಪೂಜೆ ಜೊತೆಗೆ ಯುಗಾದಿ, ಗಣೇಶ ಚತುರ್ಥಿಯ ಹಬ್ಬಗಳಂದು ಕೂಡ ದೇವಿಗೆ ವಿಶೇಷ ಪೂಜೆ ಸಲ್ಲುತ್ತದೆ. ಇಲ್ಲಿನ ಎಲ್ಲಮ್ಮ ದೇವಿಗೆ ಪ್ರಾಣಿ ಬಲಿ ಕೊಡುವುದಿಲ್ಲ, ಬದಲಿಗೆ ಹಾಲು, ಹಣ್ಣು ತುಪ್ಪಗಳನ್ನು ನೈವೇದ್ಯಕ್ಕೆ ಇಟ್ಟು ದೇವಿಗೆ ಪೂಜೆ ಸಲ್ಲಿಸಲಾಗುತ್ತದೆ. ಎಲ್ಲಮ್ಮ ತಾಯಿಯ ದರ್ಶನ ಪಡೆಯಲು ರಾಜ್ಯದ ವಿವಿಧ ಭಾಗಗಳಿಂದ ಭಕ್ತಾದಿಗಳು ಅಪಾರ ಸಂಖ್ಯೆಯಲ್ಲಿ ಬಂದು ದೇವಿಗೆ ಪೂಜೆ ಸಲ್ಲಿಸುತ್ತಾರೆ. ದೇವಿಗೆ ಮಹಾ ಪಂಚಾಮೃತ ಅಭಿಷೇಕ, ಕುಂಕುಮಾರ್ಚನೆ, ಪುಷ್ಪಾರ್ಚನೆ ಹೀಗೆ ಅನೇಕ ರೀತಿಯಲ್ಲಿ ದೇವಿಗೆ ಪೂಜೆ ಸಲ್ಲಿಸಿ ಕೃತಾರ್ಥರಾಗುತ್ತಾರೆ. ದೇವಿಯ ಹೆಸರಿನಲ್ಲಿ ಹಣ್ಣು ಕಾಯಿ ಮಾಡಿಸುವುದು, ನಿಂಬೆ ಹಣ್ಣಿನ ಆರತಿ, ಚೌಲ ತೆಗಿಸುವುದು, ತುಲಾಭಾರ, ಮುತ್ತು ಕಟ್ಟುವುದು, ಕಿವಿ ಚುಚ್ಚುವುದು, ಮೂಗು ಚುಚ್ಚುವುದು ಮುಂತಾದ ಸಾಮಾನ್ಯ ಸೇವೆಗಳನ್ನು ದೇವಿಗೆ ಮಾಡುತ್ತಾರೆ.

ಚಂದ್ರಗುತ್ತಿಯ ರೇಣುಕಾ ದೇವಿಯ ಭಕ್ತರಲ್ಲಿ ವಿದ್ಯಾವಂತರು, ಅನಕ್ಷರಸ್ಥರು, ಹೆಚ್ಚಾಗಿ ಹಿಂದುಳಿದ ವರ್ಗದವರು ಇದ್ದಾರೆ. ಜೊತೆಗೆ ಹಿಂದೂಗಳಲ್ಲದೆ ಬೌದ್ಧ, ಜೈನ, ಮುಸ್ಲಿಂ, ಕ್ರಿಶ್ಚಿಯನ್ ಹೀಗೆ ಅನ್ಯ ಧರ್ಮದವರು ಕೂಡ ದೇವಿಯನ್ನು ಪೂಜಿಸುತ್ತಾರೆ. ಕುಟುಂಬದಲ್ಲಿನ ಮದುವೆಯ ಶುಭ ಸಮಾರಂಭಗಳೆ ಬರಲಿ ಕುಟುಂಬದಲ್ಲಿ ಯಾರಾದರೂ ಸ್ವರ್ಗಸ್ಥರಾದರೆ ಅವರ ವೈಕುಂಠ ಸಮಾರಾಧನೆಗಾಗಿ, ಋತುಮತಿಯಾದ ಹೆಣ್ಣು ಮಕ್ಕಳು, ಹೆರಿಗೆಯಾದ ನಂತರ ಮಗುವಿನೊಂದಿಗೆ ಹೀಗೆ ಏನೇ ಶುಭ ಸಮಾರಂಭಗಳೇ ಇರಲಿ ಮೊದಲು ಚಂದ್ರಗುತ್ತಿಗೆ ಹೋಗಿ ದೇವಿಗೆ ಹಣ್ಣು ಕಾಯಿ ಪೂಜೆ ಸಲ್ಲಿಸಿ ದೇವಿಯ ಆಶೀರ್ವಾದ ಪಡೆದು ಬರುತ್ತಾರೆ. ಕುಟುಂಬದಲ್ಲಿನ ಸದಸ್ಯರು ಯಾರಾದರು ಕಷ್ಟಕ್ಕೆ ಸಿಲುಕಿಕೊಂಡಾಗ, ಮಗಳಿಗೆ ಮದುವೆಯಾಗದೆ ಇದ್ದರೆ , ವ್ಯಾಪಾರದಲ್ಲಿ ನಷ್ಟ ಸಂಭವಿಸಿದರೆ, ಗಂಡ ಕಾಯಿಲೆಯಿಂದ ನರಳುತ್ತಿದ್ದರೆ, ಕಣ್ಣು ಕಾಣಿಸಿದೆ ತೊಂದರೆಯಾದಾಗ, ತುಂಬ ವರ್ಷಗಳಾದರೂ ಮಕ್ಕಳಾಗದಿದ್ದರೆ ಇವುಗಳೆಲ್ಲದರ ಪರಿಹಾರಕ್ಕಾಗಿ ದೇವಿಗೆ ಹರಕೆ ಒಪ್ಪಿಸುತ್ತಾರೆ.

ದೇವಿಯ ಭಕ್ತರು ಎತ್ತು, ಕುರಿ, ಕೋಣಗಳನ್ನು ಜೀವಂತವಾಗಿ ದೇವಿಯ ಹೆಸರಿನಲ್ಲಿ ಬಿಡುತ್ತಾರೆ. ತಾವು

ಹಾಕಿದ ಫಸಲು ಹೆಚ್ಚಾದರೆ ಧನ, ಧಾನ್ಯ, ರೇಷ್ಮೆ ಸೀರೆ, ಬಂಗಾರದ ತಾಳಿ ಮುಂತಾದವುಗಳನ್ನು ದೇವಿಗೆ ಒಪ್ಪಿಸುತ್ತೇವೆಂದು ಹರಕೆ ಕಟ್ಟಿಕೊಂಡು ಅದರಂತೆ ದೇವಿಗೆ ಅರ್ಪಿಸುವರು. ಈ ಹರಕೆಗಳಲ್ಲಿ ವೈವಿಧ್ಯವಿರುತ್ತದೆ. ಉರುಳುಸೇವೆ, ದೀಡು ನಮಸ್ಕಾರ, ಸಿಡಿ ಮಾಡುವುದು ಮುಂತಾದ ಹರಕೆಗಳನ್ನು ಕೂಡ ದೇವಿಗೆ ಒಪ್ಪಿಸುತ್ತಾರೆ.

**ಬೇವಿನುಡಿಗೆ:-** ಹರಕೆ ಹೊತ್ತ ಪ್ರತಿಯೊಬ್ಬರು ವರದಾನದಿಯಲ್ಲಿ ಸ್ನಾನ ಮಾಡಿ, ಮೈತುಂಬಾ ಭಂಡಾರ ಲೇಪಿಸಿಕೊಂಡು ಬೇವಿನ ಸೊಪ್ಪು ಅಥವ ಲಕ್ಕಿ ಸೊಪ್ಪನ್ನು ಹದವಾಗಿ ಹೆಣದು ಎದೆಯಿಂದ ಮೊಳಕಾಲಿನವರೆಗೆ ಕಟ್ಟಿಕೊಂಡು, ದೇವಿಗೆ 'ಉಧೋ' ಉಧೋ' ಎಂದು ಜಯಕಾರ ಹಾಕುತ್ತ ದೇವಸ್ಥಾನದ ಸುತ್ತ ಸುತ್ತಿ ದೇವಿಗೆ ನಮಸ್ಕರಿಸಿ, ಮಾತಂಗಿ ಗುಡಿಯವರಿಗೆ ಬಂದು ಬೇವುಡಿಗೆಯನ್ನು ಬಿಚ್ಚಿ ಕೊಡದಿಂದ ನೀರು ಹಾಕಿಕೊಂಡು ಹೊಸಬಟ್ಟೆಯನ್ನು ಧರಿಸುತ್ತಾರೆ. ಇಂತಹ ಪದ್ಧತಿಯನ್ನು ಸರ್ಕಾರ ನಿಷೇಧಿಸಿದ್ದರೂ ಕೂಡ ಈ ಸಂಪ್ರದಾಯವನ್ನು ಈಗಲೂ ಉಳಿಸಿಕೊಂಡು ಬಂದಿದ್ದಾರೆ.

**ಉರುಳುಸೇವೆ:-** ಬಾವಿ ನೀರಿನಿಂದ ಸ್ನಾನ ಮಾಡಿ ಒದ್ದೆ ಬಟ್ಟೆಯಲ್ಲೆ ದೇವಿಯ ಗುಡಿಯ ಸುತ್ತಲೂ ದೇವಿಯ ಧ್ಯಾನ ಮಾಡುತ್ತಾ ಉರುಳುವುದು. ಈ ಸೇವೆ ಮೂರರಿಂದ ನೂರ ಒಂದು ಸುತ್ತುಗಳವರೆಗೆ ಇದ್ದು ಅವರವರ ದೈಹಿಕ ಸಾಮರ್ಥ್ಯವನ್ನು ಅವಲಂಬಿಸರುತ್ತದೆ.

**ಗಂಧದುಡಿಗೆ/ಅರಿಶಿನದುಡಿಗೆ:-** ಗಂಧ ಮತ್ತು ಅರಿಶಿನದುಡಿಗೆಯ ಸೇವೆಯಲ್ಲಿ ಪ್ರತ್ಯೇಕತೆ ಇಲ್ಲ, ಬೆತ್ತಲೆ ಸೇವೆ ಮಾಡುವವರು ದೇಹದ ಎಲ್ಲಾ ಭಾಗಗಳಿಗೂ ಗಂಧ ಮತ್ತು ಅರಿಶಿನವನ್ನು ತೇಯ್ದು ಹಚ್ಚಿಕೊಳ್ಳುವರು.

**ಬೆರಳಾರ್ತಿ:-** ನಮ್ಮ ಹತ್ತು ಬೆರಳುಗಳನ್ನು ಕೂಡಿಸಿ ಹತ್ತಿಯಿಂದ ತಯಾರಿಸಿದ ಬತ್ತಿಗೆ ಎಣ್ಣೆಯನ್ನು ಅದ್ದಿ ಬೆರಳಿನ ತುದಿಯಲ್ಲಿ ಇಟ್ಟುಕೊಂಡು ದೇವರಿಗೆ ಆರತಿ ಮಾಡುವುದು. ಇದನ್ನು ಮದುವೆಗೆ ಬಂದ, ಇನ್ನು ಪ್ರಸ್ಥವಾಗದ ಹೆಣ್ಣುಮಕ್ಕಳು ಈ ರೀತಿಯ ಪೂಜೆಯನ್ನು ಮಾಡುತ್ತಾರೆ.

**ದೀಡು ನಮಸ್ಕಾರ:-** ಸಾಷ್ಟಾಂಗ ನಮಸ್ಕಾರ ಮಾಡಿ ಬಲಗೈ ಮುಂದೆ ಚಾಚಿ ಗೆರೆ ಹಾಕಿ ನಾಲ್ಕು ಹೆಜ್ಜೆ ಮುಂದಿಟ್ಟು ಅಡ್ಡ ಬೀಳುತ್ತಾ ದೇವಸ್ಥಾನ ತಲುಪುವುದು. ಇದನ್ನು ವರದಾ ನದಿಯಿಂದ ಪ್ರಾರಂಭಿಸಿ ರೇಣುಕಾ ದೇವಿಯ ಗುಡಿಯವರೆಗೂ ದೇವಿಗೆ ಸಾಷ್ಟಾಂಗ ನಮಸ್ಕಾರ ಮಾಡುತ್ತಾ ಬರುವರು.

**ನಂದಾದೀಪ ಸೇವೆ:-** ನಂದಾ ದೀಪಕ್ಕೆ ಎಣ್ಣೆ ಹಾಕಿ ಅನಂತವಾಗಿ ಉರಿಯುವಂತೆ ನೋಡಿಕೊಳ್ಳುವ ಸೇವೆ ಇದು. ದಿನ, ವಾರ, ತಿಂಗಳು, ವರ್ಷದ ಅವಧಿಯವರೆಗಾದರೂ ಆಗಬಹುದು.

**ಮೆಟ್ಟಲಿಗೊಂದು ಕಾಯಿ ಒಡೆಯುವುದು:-** ದೇವಸ್ಥಾನದ ಪ್ರತಿ ಮೆಟ್ಟಲಿಗೂ ಒಂದೊಂದು ತೆಂಗಿನಕಾಯಿ ಒಡೆಯುವ ಸೇವೆಯನ್ನು ಮಾಡುವುದು.

**ಚಾಮರ ಸೇವೆ:-** ಹುಣ್ಣಿಮೆ ಮತ್ತು ಜಾತ್ರೆಗಳಲ್ಲಿ ಉತ್ಸವ ಮೂರ್ತಿಗೆ ಹರಕೆ ಹೊತ್ತವರು ಚಾಮರ ಸೇವೆಯನ್ನು ಮಾಡುವಂತದ್ದು

**ಸಿಡಿಯಾಡುವುದು:-** ನೆಲದಲ್ಲಿ ಉದ್ದವಾದ ಕಂಬ ನೆಟ್ಟು ಅದರ ತುದಿಯ ಮೇಲೆ ಅಷ್ಟೇ ಉದ್ದದ ಕಟ್ಟಿಗೆಯನ್ನು ಅಡ್ಡಲಾಗಿ ತುಲಾಭಾರದಂತೆ ನಿಲ್ಲಿಸುವುದು. ಎಡಗಡೆ ಮನುಷ್ಯನೊಬ್ಬನು ಹಗ್ಗವನ್ನು ತುಲಾಭಾರದ ತುದಿಗೆ ಕಟ್ಟಿ ಹಿಡಿದಿದ್ದರೆ ಬಲಗಡೆ ಸಿಡಿಯಾಟದ ಹರಕೆ ಹೊತ್ತವನು ಕಬ್ಬಿಣದ ಕೊಕ್ಕೆಯನ್ನು ಬೆನ್ನಿಗೆ ಅಥವಾ ಶರೀರದ ಪಕ್ಕಕ್ಕೆ ಚುಚ್ಚಿಕೊಂಡು ತಕ್ಕಡಿಯಂತೆ ಮೇಲಕ್ಕೂ ಕೆಳಕ್ಕೂ ನೇತಾಡುತ್ತಾನೆ.

**ಒದ್ದೆಯುಡಿಗೆ:-** ಬಾವಿ ನೀರಿನಿಂದ ಸ್ನಾನ ಮಾಡಿ ಒದ್ದೆ ಬಟ್ಟೆ ಸಹಿತ ರೇಣುಕಾ ದೇವಿಗೆ 'ಉಧೋ ಉಧೋ' ಎಂದು ಜಯಕಾರ ಹಾಕುತ್ತಾ ದೇವಾಲಯದವರೆಗೂ ಬರುವುದು.

**ಎಲೆ ಪೂಜೆ:-** ಎರಡು ಅಥವಾ ಐದು ನೂರು ವೀಳ್ಯೆದೆಲೆಗಳನ್ನು ದೇವಿಗೆ ಏರಿಸುವುದು. ಎಲೆ ಪೂಜೆಯ ಸೇವೆಯಲ್ಲಿ ದೇವಿಗೆ ಎಲೆ, ಹೂವು, ಹಣವನ್ನು ಹಾರ ಮಾಡಿ ದೇವಿಗೆ ಅರ್ಪಿಸುತ್ತಾರೆ. ದೇವಿಯ ಗರ್ಭಗುಡಿಯ ಬಾಗಿಲಿಗೂ ಎಲೆಯ ಹಾರವನ್ನು ಹಾಕುತ್ತಾರೆ.

**ಶಸ್ತ್ರದ ಹರಕೆ:-** ಮಾತಂಗಿ ಗುಡಿಯ ಎದುರು ಎರಡು ಹಸ್ತಗಳನ್ನು ಜೋಡಿಸಿಕೊಂಡು ಹೆಬ್ಬೆಟ್ಟಿನ ಕೆಳಭಾಗದಲ್ಲಿ ಎರಡು ಕಡೆ ಐದರಂತೆ ಹತ್ತು ಗುಂಡುಸೂಜಿಗಳನ್ನು ಅಥವಾ ಬೆಳ್ಳಿಯ ಸೂಜಿಗಳನ್ನು ಚುಚ್ಚಿಕೊಂಡು ದೇವಿಗೆ ಪ್ರದಕ್ಷಿಣೆ ಬರುತ್ತಾರೆ.

**ಬೆತ್ತಲೆ ಸೇವೆ:-** ಬೆತ್ತಲೆ ಸೇವೆಯನ್ನು ನಿರ್ವಾಣ ಸೇವೆ, ಹುಟ್ಟುಡುಗೆ, ಬೆತ್ತಲುಡಿಗೆ ಮುಂತಾದ ಹೆಸರುಗಳಿಂದ ಕರೆಯಲಾಗುತ್ತದೆ. ಶಿವಮೊಗ್ಗ ಜಿಲ್ಲೆಯ ಚಂದ್ರಗುತ್ತಿಯಲ್ಲಿ ಶತಮಾನಗಳಿಂದಲೂ ನಡೆದುಕೊಂಡು ಬಂದಿರುವ ಪದ್ಧತಿಯಾಗಿದೆ. ಕರ್ನಾಟಕದ ಶಿವಮೊಗ್ಗ ಬಳ್ಳಾರಿ, ರಾಯಚೂರು, ಧಾರವಾಡ, ಬೆಳಗಾಂ, ತೀರ್ಥಹಳ್ಳಿ ಹೀಗೆ ನಾನಾ ಕಡೆಗಳಿಂದಲೂ ಎಲ್ಲಮ್ಮನ ಭಕ್ತಾದಿಗಳು ಇದ್ದಾರೆ. ಬೆತ್ತಲೆ ಸೇವೆಗೆ ಬರುವ ಭಕ್ತರು ಹಿಂದಿನ ದಿವಸವೇ ಬಂದು ಬಿಡಾರ ಹೂಡಿ ದೇವಿಗೆ ಬೆತ್ತಲೆ ಸೇವೆ ಹರಕೆ ಒಪ್ಪಿಸುತ್ತಾರೆ. ಕಾಯಿಲೆಯಿಂದ ನರಳುತ್ತಿದ್ದವರು, ಮಕ್ಕಳಿಲ್ಲದವರು, ಮನೆಯಲ್ಲಿ ಕಷ್ಟ ತಾಪತ್ರಯಗಳಿಂದ ಕೂಡಿದ್ದವರು ತಮ್ಮ ಕಷ್ಟ ಪರಿಹಾರವಾದರೆ ನಿನ್ನ ಗುಡಿಗೆ ಬಂದು ಬೆತ್ತಲೆ ಸೇವೆ ಸಲ್ಲಿಸುತ್ತೇನೆಂದು ಹರಕೆ ಮಾಡಿಕೊಳ್ಳುತ್ತಾರೆ. ಬೆತ್ತಲೆ ಸೇವೆ ಸಲ್ಲಿಸುವ ಭಕ್ತಾದಿಗಳಲ್ಲಿ ಲಿಂಗಭೇದವಿಲ್ಲ, ವಯಸ್ಸಿನ ಪರಿಮಿತಿಯಿಲ್ಲ, ಹೆಂಗಸರು, ಗಂಡಸರು, ಹುಡುಗರು, ಹುಡುಗಿಯರು, ಚಿಕ್ಕ ವಯಸ್ಸಿನ ಮಕ್ಕಳಿಂದ ಹಿಡಿದು ವಯಸ್ಸಾದವರು ಕೂಡ ಯಾವುದೇ ತರಹದ ಮುಜುಗರವಿಲ್ಲದೆ ಇಂತಹ ಬೆತ್ತಲೆ ಹರಕೆಯನ್ನು ದೇವಿಗೆ ಒಪ್ಪಿಸುತ್ತಾರೆ. ಬೆತ್ತಲೆ ಸೇವೆ ಸಲ್ಲಿಸುವವರಲ್ಲಿ ಹೆಚ್ಚಾಗಿ ಹಿಂದುಳಿದ ಜಾತಿಯವರೇ ಆಗಿರುತ್ತಾರೆ. ಜಾತ್ರೆ ಹಿಂದಿನ ದಿವಸ ಪೂರ್ಣ ಉಪವಾಸವಿದ್ದು ಆ ದಿನವೇ ಚಂದ್ರಗುತ್ತಿಗೆ ತೆರಳಿ ತಮ್ಮ ದೈಹಿಕ ಸುಖದಿಂದ ದೂರವಿದ್ದು ತುಂಬಾ ಮಡಿಯಿಂದ ಪೂಜೆ ಸಲ್ಲಿಸುತ್ತಾರೆ. ಆದರೆ ಮುಟ್ಟಾದ ಮಹಿಳೆಯರು ದೇವಿಗೆ ಪೂಜೆ ಸಲ್ಲಿಸುವಂತಿಲ್ಲ, ಮಾರನೆ ದಿವಸ ವರದಾ ನದಿಯಲ್ಲಿ ಸ್ನಾನ ಮಾಡಿ ಕಳಸವಿಟ್ಟು ಗಂಗೆಪೂಜೆ ಮಾಡಿ, ದೇಹದ ಎಲ್ಲಾ ಭಾಗಗಳಿಗೂ ಅರಿಶಿನ ಮತ್ತು ಗಂಧದ ಲೇಪನ ಮಾಡಿಕೊಂಡು, ಕೊರಳಿಗೊಂದು, ಸೊಂಟಕ್ಕೊಂದೆಂಬಂತೆ ಕಣಗಲೆ ಹೂವಿನ ಹಾರವನ್ನು ಸುತ್ತಿಕೊಂಡು ಹಣೆಗೆ ಅರಿಶಿನ ಕುಂಕುಮವನ್ನಿಟ್ಟುಕೊಂಡು, ಬಾಯಿಯಲ್ಲಿ ಬೇವಿನ ಕಡ್ಡಿ ಸಿಕ್ಕಿಸಿಕೊಂಡು, ಅಂಗೈಯಲ್ಲಿ ಅಕ್ಕಿ, ಕಲ್ಲುಸಕ್ಕರೆ, ಎಲೆ ಅಡಿಕೆ, ಊದುಬತ್ತಿ

ಹಿಡಿದುಕೊಂಡು ಸಂಪೂರ್ಣ ನಗ್ನರಾಗಿ ''ಉಧೋ ಉಧೋ'' ಎಂದು ದೇವಿಯ ಸ್ತುತಿ ಮಾಡುತ್ತ ರೇಣುಕೆಯ ಬೆಟ್ಟಕ್ಕೆ ಓಡುತ್ತಾರೆ. ಜೊತೆಗೆ ಕುಟುಂಬದ ಸದಸ್ಯರೂ ಕೂಡ ಇವರನ್ನು ಹಿಂಬಾಲಿಸಿ ಬರುತ್ತಾರೆ. ನಂತರ ಮಾತಂಗಿ ಗುಡಿಯ ಬಳಿ ಹೋಗಿ ಹೊಸ ಬಟ್ಟೆಯನ್ನು ಧರಿಸುತ್ತಾರೆ. ಬೆತ್ತಲೆ ಸೇವೆ ಮಾಡುತ್ತೇವೆಂದು ಭಕ್ತರು ಎಷ್ಟು ವರ್ಷ ಹರಕೆ ಕಟ್ಟಿಕೊಳ್ಳುತ್ತಾರೋ ಅಷ್ಟು ವರ್ಷವೂ ಮಾಡುತ್ತಾರೆ. ದೇವಿಗೆ ಬೆತ್ತಲೆ ಹರಕೆಯನ್ನು ಒಪ್ಪಿಸುವಾಗ ಅವರನ್ನು ನೋಡಿ ಇನ್ನೊಬ್ಬರು ಅಣಕಿಸಬಾರದು, ಅಪಹಾಸ್ಯ ಮಾಡಬಾರದು. ಹಾಗೇನಾದರೂ ಮಾಡಿದರೆ ದೇವಿ ಅವರಿಗೂ ಕೊಡಬಾರದ ಕಷ್ಟಗಳನ್ನು ಕೊಡುತ್ತಾಳೆ ಎನ್ನುವ ಧಾರ್ಮಿಕ ಭಯ ಜನರಲ್ಲಿದೆ. ೧೯೮೫ರ ಮಾರ್ಚ್ ತಿಂಗಳಲ್ಲಿ ನಡೆದ ಬೆತ್ತಲೆ ಸೇವೆಗೆ ಎರಡು ಲಕ್ಷ ಮಂದಿ ಸೇರಿದ್ದು ಇದರಲ್ಲಿ ಸುಮಾರು ೨೦ ರಿಂದ ೨೫ ಸಾವಿರ ಮಂದಿ ಬೆತ್ತಲೆ ಹರಕೆ ಹೊತ್ತ ಭಕ್ತರಾಗಿದ್ದರು ಎಂದು ಅಂದಾಜು ಮಾಡಿ ಹೇಳಿದ್ದಾರೆ.

ರೇಣುಕಾ ಜಮದಗ್ನಿ ಎಂಬ ಋಷಿಯ ಪತ್ನಿ. ಇವಳು ತನ್ನ ಪಾತಿವ್ರತ್ಯದ ಸತ್ಯದಿಂದ ಮರಳಿನಿಂದ ನಿರ್ಮಿತವಾದ ಕೊಡದಲ್ಲಿ ಹಾವನ್ನೇ ಸಿಂಬಿಯನ್ನಾಗಿ ಮಾಡಿಕೊಂಡು ಮಲಪ್ರಭಾ ನದಿಯಲ್ಲಿ ಪ್ರತಿನಿತ್ಯ ನೀರು ತರುತ್ತಿದ್ದಳು. ಆದರೆ ಒಂದು ದಿನ ನೀರು ತರಲು ಹೋದಾಗ ಚಿತ್ರರಥನೆಂಬ ಗಂಧರ್ವ ತನ್ನ ಮಡದಿಯೊಂದಿಗೆ ಜಲಕ್ರೀಡೆ ಆಡುತ್ತಿದ್ದನ್ನು ಕಂಡು ತಾನು ತನ್ನ ಗಂಡನೊಂದಿಗೆ ಇದೇ ರೀತಿ ಸಂತೋಷವಾಗಿರಬೇಕೆಂದು ಆಸೆಪಟ್ಟಾಗ ಅವಳು ಕೊಡದಿಂದ ನೀರು ತರಲು ಆಗದೆ ಸಮಯ ಮೀರಿ ಆಶ್ರಮಕ್ಕೆ ಹೋದಾಗ ಜಮದಗ್ನಿ ಅವಳ ಶೀಲವನ್ನು ಶಂಕಿಸಿ, ಮಗ ಪರಶುರಾಮನಿಗೆ ರೇಣುಕೆಯ ಶಿರವನ್ನು ಕತ್ತರಿಸುವಂತೆ ಆಜ್ಞೆ ಮಾಡಿದಾಗ ರೇಣುಕೆ ತುಂಬಾ ಭಯದಿಂದ ದಿಕ್ಕೆಟ್ಟು ಓಡುತ್ತಿರುವಾಗ ಅವಳ ಮೇಲಿನ ಬಟ್ಟೆ ಮುಳ್ಳುಕಂಟಿಗಳಿಗೆ ಸಿಕ್ಕಿಕೊಂಡು ನಗ್ನಳಾಗುತ್ತಾಳೆ. ಹತ್ತಿರದ ಗುಡ್ಡದ ಗುಹೆಯೊಳಗಿರು ಶಿವಲಿಂಗವನ್ನು ತಬ್ಬಿಕೊಂಡು ರಕ್ಷಣೆ ಬೇಡುತ್ತಾಳೆ. ಅಂದಿನಿಂದ ಈಕೆಯ ಭಕ್ತರು ಈ ಬೆತ್ತಲೆ ಸೇವೆಯ ಮೂಲಕ ದೇವಿಯ ಆಶೀರ್ವಾದ ಪಡೆದರು ಎನ್ನುವ ಪ್ರತೀತಿ ಇದೆ. ಪಕ್ಕದಲ್ಲಿರುವ ಗುಡಿ ಮಾತಂಗಿಯದು. ಇದು ಬೆತ್ತಲೆ ಸೇವೆಗೆ ಕೊನೆಯ ಸ್ಥಳವಾಗಿದೆ. ಇಲ್ಲಿ ಸ್ನಾನ ಮಾಡಿ ಹೊಸ ಬಟ್ಟೆ ತೊಟ್ಟು ರೇಣುಕೆಯ ದರ್ಶನ ಪಡೆದಾಗಲೇ ಬೆತ್ತಲೆ ಹರಕೆ ಹೊತ್ತವರು ಸಹಜ ಸ್ಥಿತಿಗೆ ಬರುತ್ತಾರೆ.



ಬೆತ್ತಲೆ ಸೇವೆಯನ್ನು ೧೯೮೬ರ ಮಾರ್ಚ್ ೧೯, ೨೦, ೨೧ರಂದು ದಲಿತ ಸಂಘರ್ಷ ಸಮಿತಿ, ಇತರೆ ಸಾಮಾಜಿಕ ಸೇವಾ ಸಂಸ್ಥೆಗಳ ಕಾರ್ಯಕರ್ತರು ಪೊಲೀಸರ ನೆರವಿನಿಂದ ನಿಲ್ಲಿಸಲು ಪ್ರಯತ್ನಿಸಿ ಜೋಗತಿ-ಜೋಗಪ್ಪಗಳ ಆಕ್ರೋಶಕ್ಕೆ ಬಲಿಯಾಗಿ ನಂತರ ಚೆನ್ನವೀರಪ್ಪ ಆಯೋಗವು ಚಂದ್ರಗುತ್ತಿಯ ಬೆತ್ತಲೆಸೇವೆಯನ್ನು ಸಂಪೂರ್ಣವಾಗಿ ನಿಷೇಧಿಸಲ್ಪಟ್ಟಿತು.

ಬೆತ್ತಲೆ ಪೂಜೆಯ ಲಿಂಗ ಸಂಬಂಧದಲ್ಲಿ ಕೂಡ ಲಿಂಗ ತಾರತಮ್ಯವನ್ನು ಕಾಣಬಹುದು. 'ಬೆತ್ತಲೆ' ಎಂದರೆ ತಕ್ಷಣ ನೆನಪಿಗೆ ಬರುವುದು ಹಾಗೂ ನಮ್ಮ ಕಲ್ಪನೆಯಲ್ಲಿ ಬರುವುದು ಹೆಣ್ಣಿನ ದೇಹ ಚಿತ್ರಣ. ಏಕೆಂದರೆ, ಮಹಿಳೆಯನ್ನು ಬೆತ್ತಲೆ ಸೇವೆ ಎಂಬ ಪದ್ಧತಿ ಮುಖಾಂತರ ಹೆಣ್ಣನ್ನು ನಗ್ನಗೊಳಿಸಲಾಗುತ್ತದೆ. ಬೆತ್ತಲೆಯನ್ನು ದೇವರ ಹೆಸರಿನಲ್ಲಿ ನಡೆಸಲಾಗುತ್ತದೆ. ಬೆತ್ತಲೆ ಪೂಜೆ ಎನ್ನುವುದು ಹೆಚ್ಚಿನದಾಗಿ ಮಹಿಳೆಯರಿಗೆ ಅನ್ವಯಿಸುವಂತದ್ದು.

ಪುರುಷರು ಇಂತಹ ಪದ್ಧತಿಯನ್ನು ಆಚರಿಸುವುದಿಲ್ಲ. ಪುರುಷರು ಹೆಣ್ಣಿನ ದೇಹದಲ್ಲಿ ಸೌಂದರ್ಯವನ್ನು ಕಾಣುತ್ತಾರೆ. ದೈಹಿಕ ಮಾರ್ಪಾಡುಗಳಿಗೆ ಮಹತ್ವ ಕೊಡುತ್ತಾರೆ. ಮಹಿಳೆಯು ಪುರುಷರಿಗಿಂತ ಭಿನ್ನ ಅಂಗಗಳನ್ನು ಹೊಂದಿರುವುದರಿಂದ ಹಾಗೂ ಆಕರ್ಷಣೆಗೊಳ್ಳುವ ದೇಹ ರಚನೆ ಇರುವುದರಿಂದ ಕಾಮುಕ ಕಣ್ಣುಗಳಿಗೆ ಹೆಣ್ಣಿನ ಕುಕ್ಕುತ್ತದೆ. ಮೇಲ್ ವರ್ಗದವರು ಲೈಂಗಿಕ ಕಾಮನೆಗಳು ಹಾಗೂ ಲೈಂಗಿಕಾಸಕ್ತಿಯನ್ನು ಪ್ರಚೋದಿಸಲು ಮಹಿಳೆಯನ್ನು ಬೆತ್ತಲೆಗೊಳಿಸಿ ದೇವರ ಹೆಸರಿನಲ್ಲಿ ಎಂದು ಕುಂಟು ನೆಪ ಹೇಳಿ ಅದೊಂದು ಸಾಂಪ್ರದಾಯಿಕ ಪದ್ಧತಿಯನ್ನಾಗಿ ಮಾಡಲಾಗಿದೆ. ಪುರುಷರು ಯಾಕೆ ಬೆತ್ತಲೆ ಪೂಜೆ ಮಾಡುವುದಿಲ್ಲಾ? ಮಹಿಳೆಯರಿಗೆ ಬೆತ್ತಲೆ ಪೂಜೆ ಮಾಡುವಂತಹ ಪರಿಸ್ಥಿತಿ ಏನಿದೆ ಹಾಗೂ ಕಾರಣಗಳೇನು? ಎಂದು ಪ್ರಶ್ನೆಗಳು ಉದ್ಭವಿಸುತ್ತದೆ. ಬೆತ್ತಲೆ ಪೂಜೆಗೆ ಪುರುಷ ಪ್ರಧಾನ ವ್ಯವಸ್ಥೆಯ ಹುನ್ನಾರವಿದೆ.

"ಭಾರತದ ಮಾನವನ ಇತಿಹಾಸದಲ್ಲಿ ಬೆತ್ತಲೆ ಸೇವೆ, ದೇವದಾಸಿ ಪದ್ಧತಿ, ಪರದಾ ಪದ್ಧತಿ, ಸತಿ ಸಹಗಮನ ಪದ್ಧತಿ, ಬಾಲ್ಯವಿವಾಹ, ಹೆಣ್ಣು ಭ್ರೂಣ ಹತ್ಯೆ, ಮಹಿಳೆಯರ ಅಪಹರಣ, ಜಾತಿ ಹೆಸರಿನಲ್ಲಿ ಮಹಿಳೆಯ ಮೇಲೆ ಅತ್ಯಾಚಾರದ ಅಸ್ತ್ರ ಬಳಕೆ, ಧರ್ಮ, ದೇವರು ಹೆಸರಿನಲ್ಲಿ ಹೆಣ್ಣಿನ ಮೇಲೆ ಅಮಾನವೀಯ ರೀತಿ ರಿವಾಜುಗಳನ್ನು ಹೇರಿರುವುದು, ಬಹುಪತ್ನಿತ್ವ, ವೇಶ್ಯಾವೃತ್ತಿ, ಅಸಮಾನತೆ, ವರದಕ್ಷಿಣೆ, ಕೌಟುಂಬಿಕ ದೌರ್ಜನ್ಯಗಳು, ಸ್ತ್ರೀಯರನ್ನು ಸಂತೆಯಲ್ಲಿ ಹರಾಜು ಹಾಕುವುದು ಹೀಗೆ ಇನ್ನು ಹತ್ತು ಹಲವು ಅನಾಗರೀಕ, ಅವೈಜ್ಞಾನಿಕ ಪದ್ಧತಿಗಳು ಜಾರಿಯಲ್ಲಿರುವುದನ್ನು ಕಾಣಬಹುದು. ಹತ್ತೊಂಬತ್ತನೆಯ ಶತಮಾನದಲ್ಲಿ ಪುರುಷ ದಬ್ಬಾಳಿಕೆ ವಿರುದ್ಧ ಆಧುನಿಕ ಸ್ತ್ರೀ ವಾದಿ ಚಿಂತನೆಗಳು ಸವಾಲೆಸೆದವು, ದಂಗೆ ಎದ್ದವು. ಮನುಷ್ಯನ ಸ್ವಭಾವವನ್ನು ಹೆಣ್ಣಿನದು, ಗಂಡಿನದು ಎಂದು ಎರಡು ಬಗೆಯಲ್ಲಿ ವಿಂಗಡಿಸಲಾಗುತ್ತದೆ. ಕೋಮಲತೆ, ಮಾರ್ದವತೆ, ಭಯ ಭಾವನಾ ಶೀಲತೆಗಳು ಹೆಣ್ಣಿನ ಗುಣಗಳೆಂದೂ; ಸಾಹಸ, ಆಕ್ರಮಣಕಾರಿತನ, ಬಿರುಸು ಇವೆಲ್ಲವೂ ಗಂಡಿನ ಗುಣವೆಂದು ತಿಳಿಯಲಾಗಿದೆ.

ಚಂದ್ರಗುತ್ತಿಯಲ್ಲಿ ನಡೆಯುವ ಬೆತ್ತಲೆ ಸೇವೆಯನ್ನು ಸಾಮಾಜಿಕವಾಗಿ, ಆರ್ಥಿಕವಾಗಿ ಹಾಗೂ ಧಾರ್ಮಿಕವಾಗಿ ಎಂದು ಮೂರು ದೃಷ್ಟಿಕೋನದಿಂದ ಪರಿಶೀಲಿಸಬೇಕಾಗಿದೆ. ಇಲ್ಲಿ ಬೆತ್ತಲೆ ಸೇವೆ ನಿರ್ವಹಿಸುವ ಮಹಿಳೆ, ಸಾಮಾಜಿಕವಾಗಿ ಹಿಂದುಳಿದ ವರ್ಗ, ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡಗಳಿಗೆ ಸೇರಿದವರಾಗಿದ್ದಾರೆ. ಶೇಕಡ 80 ಭಾಗದ ಮಹಿಳೆಯರು ಆರ್ಥಿಕವಾಗಿ ಸಬಲರಾಗಿಲ್ಲದ, ಪುರುಷರ ದುಡಿಮೆಯಿಂದ ಬದುಕು ಸಾಗಿಸುವ ಜನರೇ ಆಗಿದ್ದಾರೆ. ಅವರಲ್ಲಿ ಶಿಕ್ಷಣ, ಅಕ್ಷರ ಜ್ಞಾನವುಳ್ಳವರ ಸಂಖ್ಯೆ ಬಹಳ ಕಡಿಮೆ. ಅಂಧಾನುಕರಣೆ, ಮೌಢ್ಯ ಕಂದಾಚಾರ, ಅನಕ್ಷರತೆ ಅವರಲ್ಲಿ ಹಾಸು ಹೊಕ್ಕಾಗಿದೆ. ಇಂತಹ ಸಮಾಜ ವ್ಯವಸ್ಥೆಯಲ್ಲಿ ಧಾರ್ಮಿಕ ಕಟ್ಟುಪಾಡುಗಳು ಬಹಳ ವೇಗವಾಗಿ ಹಾಗೂ ತೀಕ್ಷ್ಣವಾಗಿ ಹೇರಲ್ಪಡುತ್ತವೆ. ಇಂತಹ ಸಂದರ್ಭದಲ್ಲಿ ಹೇರಲ್ಪಟ್ಟ ಧಾರ್ಮಿಕ ಕಟ್ಟುಪಾಡುಗಳಲ್ಲಿ ಬೆತ್ತಲೆ ಸೇವೆಯಂಥ ಅಮಾನವೀಯ ಪದ್ಧತಿಯೂ ಒಂದಾಗಿದೆ.

ಬೆತ್ತಲೆ ಸೇವೆಗೆ ಯಾವುದೇ ವೈಜ್ಞಾನಿಕವಾದ, ವೈಚಾರಿಕವಾದ ತಳಹದಿ ಇಲ್ಲ. ಇದನ್ನು ಜಾತಿಯ ತಾರತಮ್ಯ, ಲಿಂಗ ತಾರತಮ್ಯ ಹಿಂಸೆ, ಲೈಂಗಿಕತೆಯ ಆಧಾರದ ಮೇಲೆ ಹೇರಲ್ಪಟ್ಟ ಒಂದು ಧಾರ್ಮಿಕ ಆಚರಣೆ ಎನ್ನಬಹುದು.

ಇಂತಹ ಆಚರಣೆಯ ವಿರುದ್ಧ ಮೊಟ್ಟ ಮೊದಲಿಗೆ ಧ್ವನಿ ಎತ್ತಿದವರು ಪ್ರೊ॥ ಬಿ. ಕೃಷ್ಣಪ್ಪನವರು. 1984ರಲ್ಲಿ ಚಂದ್ರಗುತ್ತಿಗೆ ತೆರಳಿ ಅಲ್ಲಿನ ಅಮಾನುಷ ಆಚರಣೆಯನ್ನು ಕಣ್ಣಾರೆ ಕಂಡು, ಬಹಳವಾಗ ಇನ್ನೊಂದು ಈ ಆಚರಣೆಯನ್ನು ಕೊನೆಗಾಣಿಸಬೇಕೆಂದು ಮನಸ್ಸಿನಲ್ಲೇ ನಿರ್ಧಾರ ತೆಗೆದುಕೊಂಡು ಕಾರ್ಯಪ್ರವೃತ್ತರಾದರು. ಅದರ ಫಲವೇ 1984ರಲ್ಲಿ ಚಿತ್ರಸಹಿತ ವರದಿಯನ್ನು ಲೇಖನ ರೂಪದಲ್ಲಿ ಲಂಕೇಶ್ ಪತ್ರಿಕೆಯ ಮೂಲಕ ಪ್ರಕಟಗೊಳಿಸಿದರು. ಆಗ ಇದು ವಿಧಾನಸಭೆಯಲ್ಲಿ ಹಾಗೂ ಜನಸಮುದಾಯದಲ್ಲಿ ಬಹು ಚರ್ಚಿತವಾದ ವಿಷಯವಾಗಿತ್ತು. ಸರ್ಕಾರ, ಬೆತ್ತಲೆ ಸೇವೆಯನ್ನು ನಿಲ್ಲಿಸಬೇಕೆಂದು ನಿಲುವನ್ನು ತೆಗೆದುಕೊಂಡು, ಅದಕ್ಕಾಗಿ ಜಿಲ್ಲಾಡಳಿತಕ್ಕೆ ಸೂಚನೆ ನೀಡಿತು. ಜಿಲ್ಲಾಡಳಿತ ಆಗಿನ ದಲಿತ ಸಂಘ, ಪ್ರಗತಿಪರ ಸಂಘಟನೆಗಳ ಜತೆಗೂಡಿ ಬೆತ್ತಲೆ ಸೇವೆ ನಿಲ್ಲಿಸುವ ಕಾರ್ಯ ಯೋಜನೆ ರೂಪಿಸಿತ್ತು. ಅದರ ಫಲಶೃತಿಯೇ 1986ರಲ್ಲಿ ನಡೆದ ಬೆತ್ತಲೆ ಸೇವೆ ನಿಷೇಧ ಚಳುವಳಿ. ಈ ನಿಷೇಧ ಚಳುವಳಿಯಲ್ಲಿ ಜನರು, ಸಂಘಟನೆಗಳು ಹಾಗೂ ಸರ್ಕಾರ ಭಾಗಿಯಾಗಿದ್ದುದರಿಂದ ಇದೊಂದು ಸಾಮಾಜಿಕ ಚಳುವಳಿಯಾಗಿ ರೂಪುಗೊಂಡಿತು ಎಂದು ಇಂದಿರಾ ಕೃಷ್ಣಪ್ಪರವರು ಹೇಳುತ್ತಾರೆ.

ನಮ್ಮ ಸಮಾಜದಲ್ಲಿರುವ ನಾಗರೀಕ ಗಂಡು- ಹೆಣ್ಣುಗಳನ್ನು ದೈಹಿಕ ಬದಲಾವಣೆಗಳ ಮುಖಾಂತರ, ವರ್ತನೆಗಳ ಮುಖಾಂತರ ಪ್ರತಿಯೊಂದರಲ್ಲೂ ಪ್ರತ್ಯೇಕತೆಯನ್ನು ಹೊಂದಿರುತ್ತಾರೆ. 'ಮೊಲೆ ಮೂಡಿ ಬಂದರೆ ಹೆಣ್ಣೆಂಬರು, ಗಡ್ಡ ಮೀಸೆ ಬಂದರೆ ಗಂಡೆಂಬರು' ಎಂಬ ವಚನದ ಸಾಲು ಹೆಣ್ಣು- ಗಂಡುಗಳ ಹೊರಗಿನ ದೈಹಿಕ ಲಕ್ಷಣಗಳನ್ನು ಹೇಳುವಂತದ್ದಾಗಿದೆ. ಆದರೂ ಇವು ನಿಸರ್ಗ ಸಹಜ ಗುಣಗಳಾಗಿವೆ. ಗಂಡು – ಹೆಣ್ಣುಗಳು ಎಲ್ಲಾ ವಿಷಯಗಳಲ್ಲಿ ಸಮಾನದವಾದ ಅಂಶಗಳನ್ನು ಅಳವಡಿಸಿಕೊಂಡಿದ್ದರೂ ದೈಹಿಕ ರಚನೆಯಲ್ಲಿ ವಿಶಿಷ್ಟವಾದ ಹಾಗೂ ವಿಭಿನ್ನವಾದ ಗುಣಲಕ್ಷಣಗಳನ್ನು ಹೊಂದಿರುತ್ತಾರೆ. ಸಂತಾನೋತ್ಪತ್ತಿಗಾಗಿ ಹೆಣ್ಣಿಗೆ ಕೆಲವು ಅಂಗಗಳನ್ನು ಪ್ರಕೃತಿಯೇ ಒದಗಿಸಿದೆ. ಹೆಣ್ಣು ಸೃಷ್ಟಿಯ ಧ್ಯೋತಕ. ಸಕಲ ಜೀವಿ ಸಂಕುಲಗಳಲ್ಲಿ ಲಿಂಗ ಭೇದವನ್ನು ಸಹಜವಾಗಿ ಕಾಣಬಹುದು. ಹೆಣ್ಣು ಪರಿಪೂರ್ಣಳಲ್ಲ, ಗಂಡು ಪರಿಪೂರ್ಣನಲ್ಲ ಈ ಎರಡೂ ಜೀವಿಗಳು ಸೇರಿದಾಗ ಹೊಸದೊಂದು ಜೀವ ಸೃಷ್ಟಿಯಾಗುತ್ತದೆ. ಇದು ನಿಸರ್ಗವು ಕೊಟ್ಟ ಕೊಡುಗೆ. ಹಾಗಾಗಿ ನಿಸರ್ಗ ಸಹಜವಾದ ಲಿಂಗ ಭೇದ ನೀತಿಯಲ್ಲಿ ಹೆಣ್ಣು ಗಂಡುಗಳಿಬ್ಬರೂ ಸಮಾನವಾಗಿ ಮುಖ್ಯರು, ಪ್ರಧಾನರೂ ಆಗಿರುತ್ತಾರೆ. ಯಾರು ಕನಿಷ್ಠರೂ ಅಲ್ಲ, ಯಾರು ಶ್ರೇಷ್ಠರೂ ಅಲ್ಲ, ಇಬ್ಬರಲ್ಲೂ ಸಮಾನವಾದ ವಿಶಿಷ್ಠ ಗುಣಗಳಿವೆ. ಆದರೆ ಸಮಾಜ ಅವರಿಬ್ಬರಲ್ಲಿ ಲಿಂಗ ಭೇದ ತಾರತಮ್ಯವನ್ನು ಮಾಡುತ್ತದೆ. ಸ್ತ್ರೀ- ಪುರುಷರಲ್ಲಿ ನಿಸರ್ಗ ಸಹಜವಾಗಿ ಲಿಂಗ ಭೇದವಿದೆ. ಆದರೆ ಸಮೂಜದಲ್ಲಿ ಲಿಂಗ ತಾರತಮ್ಯ ಉಂಟಾಗಿ ಹೆಣ್ಣಿನ ಬದುಕಿಗೆ ದುರಂತವಾಗಿದೆ. ಸಮಾಜ ವ್ಯವಸ್ಥೆಯಲ್ಲಿ ಮೊಟ್ಟಮೊದಲಿಗೆ ಉಂಟಾದ ಶ್ರೇಣೀಕರಣವೆಂದರೆ, ಸ್ತ್ರೀ- ಪುರುಷ ತಾರತಮ್ಯವೇ. ಸಮಾಜ ವ್ಯವಸ್ಥೆಯಲ್ಲಿ ಯಾವ ಕಾರಣಗಳಿಂದ ಪುರುಷ ಮೇಲುಗೈ ಪಡೆಯುವಂತಾದ ಸ್ತ್ರೀಯು ಯಾವ ಕಾರಣದಿಂದ ಅಬಲೆ, ಪರಾಧೀನೆಯಾದಳು ಎಂಬ ಪ್ರಶ್ನೆಗಳಿಗೆ ಮಾನವ ಸಮಾಜದ ಇತಿಹಾಸವನ್ನು ಶೋಧಿಸಬೇಕಾಗುತ್ತದೆ. ಶತಮಾನಗಳಿಂದಲೂ ಈ ತಾರತಮ್ಯಗಳನ್ನು ಕಾಣಬಹುದಾಗಿದೆ. ಪ್ರತಿಯೊಂದು ಸಮುದಾಯಗಳಲ್ಲೂ ಸ್ತ್ರೀ- ಪುರುಷ ತಾರತಮ್ಯವು ಬೇರು ಬಿಟ್ಟಿರುವ ಸಮಸ್ಯೆಯೇ ಆಗಿದೆ. ತಾನಿರುವ ಈ ದುಸ್ಥಿತಿಗೆ ಕಾರಣ ತಾನಿರುವ ವಾತಾವರಣ ಎಂದು ತಿಳಿದು

ಹೆಣ್ಣಾಗಿ ಹುಟ್ಟಬಾರದೆಂದು ತನ್ನ ಹೆಣ್ಣಿನ ಜನ್ಮವನ್ನು ಶಪಿಸಿಕೊಳ್ಳುತ್ತಾಳೆ. ಮನೆಯ ಒಳಗಿನ ಕೆಲಸಗಳೆಲ್ಲಾ ಹೆಣ್ಣಿನದು, ಹೊರಗಿನ ಕೆಲಸಗಳೆಲ್ಲಾ ಗಂಡಿನದು ಎಂಬುದು ನಡೆದು ಬಂತು. ಆದರೆ ಕುಟುಂಬದಲ್ಲಿನ ಆರ್ಥಿಕ ತೊಂದರೆಗೆ ಸಿಲುಕಿ ಮನೆಯಲ್ಲಷ್ಟೇ ಕೆಲಸ ಮಾಡಿಕೊಂಡಿದ್ದಾಕೆ ಈಗ ಹೊರಗಿನ ಕೆಲಸಕ್ಕೂ ಕೈಹಚ್ಚಿದ್ದಾಳೆ. ಗುಲಾಮಳಂತೆ ಮನೆಯ ಒಳಗಿನ ದುಡಿತದೊಂದಿಗೆ ಹೊರಗಿನ ಕೆಲಸವನ್ನು ಆಕೆ ಮಾಡಲಾರಂಭಿಸುತ್ತಾಳೆ. ಆದರೆ ಅದೇ ಮುಂದೆ ಅವಳ ಬಾಳಿಗೆ ಪರೋಕ್ಷವಾಗಿ ಮುಖ್ಯ ತಿರುವನ್ನು ನೀಡುತ್ತದೆ. ಹೊಸಲಿನಿಂದ ಆಚೆ ಹೋಗಿ ದುಡಿವ ಆ ಹೆಣ್ಣಿನ ಜೀವಕ್ಕೆ ಹೊಸ ಚೈತನ್ಯ ತುಂಬುತ್ತಾ ಹೋಯಿತು. ಇಷ್ಟು ದಿನಗಳ ತನ ದುಃಖಕ್ಕೆ ತನ್ನ ಹೆಣ್ಣು ಜನ್ಮ ಕಾರಣವಲ್ಲ, ತನಗೆ ಪ್ರತಿಕೂಲವಾಗಿರುವ ಈ ಸಮಾಜ ವ್ಯವಸ್ಥೆಯೇ ಕಾರಣವಾಗಿದೆ ಎಂಬುದು ಸ್ಪಷ್ಟವಾಯಿತು. ಮನೆಯ ನಾಲ್ಕು ಗೋಡೆಗಳ ಮಧ್ಯೆ ಇಷ್ಟು ದಿನ ಇದ್ದ ಆಕೆ ಏಕಾಂಗಿಯಾಗಿ ಈ ದುಃಖ ತನಗೆ ಮಾತ್ರ ಎನ್ನುವಂತೆ ತಿಳಿದು ದಿಕ್ಕು ತೋಚದವಳಂತಿದ್ದಳು. ಆದರೆ ಈಗ ತನ್ನಂತೆಯೇ ಇರುವ ಹತ್ತು ಹಲವು ಹೆಂಗಸರೊಂದಿಗೆ ಸಂಪರ್ಕ, ಮಾತುಕತೆ ಬೆಳೆದು ತನ್ನ ದುಃಖ ತನ್ನದು ಮಾತ್ರವಲ್ಲ, ಇಡೀ ಮಹಿಳಾ ಬದುಕೇ ಈ ದುಃಖ ಸಾಗರದಲ್ಲಿ ಮುಳುಗಿದೆ ಎಂಬ ಸಾಮುದಾಯಿಕ ಪ್ರಜ್ಞೆ ಮೂಡುವಂತಾಯಿತು. ಇಂದಿನ ಯುಗದಲ್ಲಿ ಮಹಿಳೆಯರು ನಾವು ಪುರುಷರಿಗಿಂತ ಕೆಳ ಶ್ರೇಣಿಯವರೆಂದು ಗುರುತಿಸಿಕೊಳ್ಳಲು ಯಾರು ಕೂಡ ಇಷ್ಟಪಡುವುದಿಲ್ಲ, ನಾವು ಪುರುಷರಿಗಿಂತ ಯಾವುದರಲ್ಲಿಯೂ ಕಮ್ಮಿಯಿಲ್ಲ, ಲಿಂಗ ತಾರತಮ್ಯದ ನೆಲೆಯಲ್ಲೂ ಕೂಡ ಮಹಿಳೆ ಎಲ್ಲಾ ಕ್ಷೇತ್ರಗಳಲ್ಲೂ ಪುರುಷರಿಗಿಂತ ಕಡಿಮೆ ಇಲ್ಲ ಎಂದು ಈ ಜಗತ್ತಿಗೆ ಸಾರಿದ್ದಾಳೆ. ತಾನು ಯಾವುದರಲ್ಲಿಯೂ ಕಡಿಮೆ ಇಲ್ಲ ಎಂದು ಸಾಧನೆಯ ಪಥದಲ್ಲಿ ಸಾಗುತ್ತಿದ್ದಾಳೆ. ಜೈವಿಕ ಆಧಾರದ ಮೇಲೆ ಪುರುಷ ಪ್ರಧಾನ ವ್ಯವಸ್ಥೆ ಅಸಮರ್ಥಳು, ಅಬಲೆ ಎಂದು ಮೂಲೆಗುಂಪು ಮಾಡಿದಾಗ ಈ ಎಲ್ಲಾ ಸಂಕೋಲೆಗಳಿಂದ ಬಿಡುಗಡೆ ಹೊಂದುವ ಪ್ರಯತ್ನ ಮಾಡುತ್ತಿದ್ದಾಳೆ. ಪುರುಷ ಸಮುದಾಯ ಮಹಿಳೆಯನ್ನು ವಿವಾಹ ಎನ್ನುವ ಸಂಸ್ಥೆಯ ಮೂಲಕ ತನ್ನ ಅಧೀನದಲ್ಲಿ ಇಟ್ಟುಕೊಂಡಿದ್ದಾನೆ. ಪುರುಷ ಪ್ರಧಾನತೆ ಮಹಿಳೆಯನ್ನು ವಿಭಿನ್ನ ನೆಲೆಗಳಿಂದ ಶೋಷಣೆ ಮಾಡುತ್ತಾ ಬಂದಿದೆ. ಪುರುಷರಿಗೆ ಪಾವಿತ್ರತೆ ಅನ್ನೋದೆ ಇಲ್ಲ, ಮಹಿಳೆಗೆ ಮಾತ್ರ ಪಾವಿತ್ರತೆ, ಶೀಲ, ಕನ್ಯತ್ವ ವ್ಯವಸ್ಥೆಯನ್ನು ರೂಪಿಸಿದೆ. ಒಂದು ಕಡೆ ಪುರುಷರೇ ಮಹಿಳೆಯರ ಶೀಲಾಪಹರಣ ಮಾಡುತ್ತಾರೆ. ಇನ್ನೊಂದು ಕಡೆ ಅವಳ ಲೈಂಗಿಕತೆಯ ಮೇಲೆ ಹತೋಟಿ ಮಾಡಲಾಗುತ್ತದೆ. ಯಾವ ದಿಕ್ಕಿನಿಂದ ನೋಡಿದರೂ ಮಹಿಳೆಯ ಎಲ್ಲಾ ಮೂಲಗಳಿಂದ ಶೋಷಣೆಯ ವಸ್ತುವಾಗಿದ್ದಾಳೆ. ನೋವನ್ನು ಅನುಭವಿಸುವವಳು ಹೆಣ್ಣು ಮಾತ್ರ. ಹೆಣ್ಣು ಹುಟ್ಟಿದ ತಕ್ಷಣ ತಾರತಮ್ಯದ ಒಳಗಾಗಿದ್ದಾಳೆ. ಹುಟ್ಟಿದ ಕುಟುಂಬದಲ್ಲಿಯೇ ಹೆಣ್ಣು ಹೀಗೆ ಇರಬೇಕು, ಹಾಗೆ ಇರಬೇಕು, ಮೃದು, ಸಹನೆ ಇನ್ನು ಮುಂತಾದ ಪುರುಷ ಮೌಲ್ಯಗಳು ಅವಳನ್ನು ಅಸ್ತಿತ್ವ ಇಲ್ಲದಂತೆ ಮಾಡುತ್ತದೆ. ಮಹಿಳೆಯ ಬಗ್ಗೆ ಸಮಾಜ ಹೊಂದಿರಬಹುದಾದ ಕ್ರೂರ ಪಕ್ಷಪಾತ ಧೋರಣೆಗಳನ್ನು ತೋರಿಸುತ್ತದೆ. ಮಹಿಳೆಯ ಜೈವಿಕ ವಿಶಿಷ್ಟತೆ ಅವಳ ಬದುಕಿನಲ್ಲಿ ಮಹತ್ತರ ಪಾತ್ರ ವಹಿಸುತ್ತದೆ. ಮಹಿಳೆ ತನ್ನ ಬದುಕಿನಲ್ಲಿ ಪಡೆಯುವ ಸ್ಥಾನಮಾನ ಅವಳಲ್ಲಿ ಆಂತರಿಕವಾದ ಜೈವಿಕ ಅಂಶದ ಪಾತ್ರಕ್ಕೆ ಅನುಸಾರವಾಗಿ ಇರುತ್ತದೆ.

ಸಮಾಜದಲ್ಲಿ ವ್ಯವಸ್ಥೆಗನುಗುಣವಾಗಿ ಜೀವನ ಮಾಡುತ್ತಿದ್ದವರಲ್ಲಿ ಒಂದು ಕಠೋರವಾದ ಪದ್ಧತಿಯೆಂದರೆ

ಬೆತ್ತಲೆ ಸೇವೆ. ಇದು ಮೇಲ್ ವರ್ಗದ ಜನರು ದುರ್ಬಲರ ಮೇಲೆ ಮಾಡುತ್ತಿದ್ದ ಒಂದು ಕೆಟ್ಟ ಪದ್ಧತಿ. ಪುರಾತನ ಕಾಲದಿಂದ ನಡೆಯುತ್ತಿದ್ದ ಸಂಪ್ರದಾಯವಾಗಿದೆ. ಇಂತಹ ಸಂದರ್ಭದಲ್ಲಿ ಮೇಲ್ವರ್ಗದವರು ತಮ್ಮ ಅನುಭೋಗಕ್ಕಾಗಿ ಮಾಡಿಕೊಂಡ ಸುಲಭವಾದ ಮಾರ್ಗ. ಮೊದಲಿನಿಂದಲೂ ಸ್ತ್ರೀಯರಿಗೆ ಶೋಷಣೆಯಾಗುತ್ತಿದ್ದುದು ಸಹಜ. ಆದರೆ ದಲಿತ ಸ್ತ್ರೀಯರು ಅತಿಯಾಗಿಯೇ ಶೋಷಣೆಯಾಗುತ್ತಿದ್ದುದು ಸಹಜವಾದ ಪ್ರವೃತ್ತಿ. ಸಮಾಜದಲ್ಲಿರತಕ್ಕಂತ ಶ್ರೇಣಿಗಳಿಗನುಗುಣವಾಗಿ ವೃತ್ತಿಗಳು ವಿಂಗಡಣೆಯಾಗುತ್ತಿದ್ದವು. ಆದರಂತೆಯೇ ದೇವದಾಸಿಯರನ್ನು ಬಿಡುವುದು ಇದರಲ್ಲಿಯೇ ಬೆತ್ತಲೆಸೇವೆಯನ್ನು ಮಾಡುತ್ತಿದ್ದರು. ಈ ಪದ್ಧತಿಯಿಂದ ಸ್ತ್ರೀಯರಿಗೆ ಅವಮಾನವಾಗುತ್ತಿದ್ದಲ್ಲದೇ, ಇದನ್ನು ಕೆಳಜಾತಿಯವರು ಮಾಡುತ್ತಿದುದ್ದು ದೊಡ್ಡ ದುರಂತ. ದೈಹಿಕವಾಗಿ ಪುರುಷರು ಹೆಣ್ಣಿನ ಮೇಲೆ ಆಕ್ರಮಣ ಮಾಡುವುದು ಸಹಜ ಹಾಗೂ ಸತ್ಯ ಎಂದು ಹೇಳಬಹುದಾಗಿದೆ. ಹೀಗೆ ಗಂಡು ಕೇವಲ ಹೆಣ್ಣನ್ನು ಅನುಭೋಗಿಸುವುದಲ್ಲದೇ ಸಂತಾನ ವೃದ್ಧಿಗಾಗಿ ತಮ್ಮ ಕುಟುಂಬ ಬೆಳೆಯಲೆಂದೇ ಮಾಡುವುದು ಒಂದು ಕಡೆಯಾದರೆ, ತಮ್ಮ ಸಂತೋಷಕ್ಕಾಗಿ ಹೆಣ್ಣನ್ನು ಬಳಸಿಕೊಳ್ಳುವುದು ಇನ್ನೊಂದು ಪ್ರವೃತ್ತಿ. ಇದಲ್ಲದೇ ಗಂಡು ಹೆಣ್ಣಿನ ಮೇಲೆ ಯಾವ ರೀತಿ ದಬ್ಬಾಳಿಕೆ ಮಾಡುತ್ತಾನಲ್ಲದೇ, ಅವಳ ಮನಸ್ಸಿನ ಮೇಲೆ ಯಾವ ರೀತಿಯಾಗಿ ಪರಿಣಾಮ ಬೀರುತ್ತದೆ ಎಂಬುದು ಹೇಳುವುದೇ ಕಷ್ಟ ಆದರೆ ಬೆತ್ತಲೆ ಸೇವೆಯಲ್ಲಿ ಮಹಿಳೆಯರನ್ನು ನೋಡುವ ರೀತಿ ಮೇಲ್ ವರ್ಗದ ಪುರುಷರು ತಮ್ಮ ಅನುಕೂಲಕ್ಕಾಗಿ ದೇವದಾಸಿಯನ್ನು ಬಿಡುವುದರಿಂದ ತಮ್ಮ ಕಷ್ಟಗಳೆಲ್ಲಾ ಪರಿಹಾರವಾಗುತ್ತದೆಯೆಂದು ಹೇಳಿ ಅದನ್ನು ಕೆಳಜಾತಿಯವರೇ ಬಿಡಬೇಕು ಎಂದು ಹೇಳಿ ಇಂತಹ ಪದ್ಧತಿಯು ಜಾರಿಗೆ ಕಾರಣವಾಯಿತು. ಹೀಗೆ ಪುರುಷರು ಹೆಣ್ಣನ್ನು ಒಂದು ''ಭೋಗದ ವಸ್ತು'' ಎಂದು ನೋಡುತ್ತಾರೆಯೇ ಹೊರತು ಅವಳು ಹೆಣ್ಣು ಅಂತ ಅಲ್ಲ. ಹೆಣ್ಣನ್ನು ಅವಳ ದೇಹವನ್ನು ಯಾವ ರೀತಿಯಾಗಿ ಸಂಭೋಗಿಸಬೇಕು ಎಂದು ಪುರುಷ ಯೋಚನೆ ಮಾಡುತ್ತಾನೇ ಹೊರತು ಈ ಹೆಣ್ಣಿಗೂ ಕೂಡ ಮನಸ್ಸಿಗೆ ಇವಳಿಗೂ ಕೂಡ ಆಸೆ ಆಕಾಂಕ್ಷೆಗಳಿದ್ದಾವೆ ಎಂಬುದನ್ನು ಮರೆತು, ತಾವು ಪುರುಷರು ಹೆಣ್ಣು ಕೇವಲ ಸಂಭೋಗದ ವಸ್ತು, ಹೆಣ್ಣು ಕುಟುಂಬದ ಕೆಲಸವನ್ನು ನೋಡಿಕೊಂಡಿರುವ ಯಂತ್ರ ಎಂದು ಪುರುಷ ಸಮಾಜ ನಂಬಿದೆ.

ಪುರಾತನ ಕಾಲದಿಂದ ಹಿಡಿದು ಇಲ್ಲಿಯವರೆವಿಗೂ ಶೋಷಣೆಗೆ ಒಳಗಾಗುತ್ತಿದ್ದವಳು ''ಮಹಿಳೆ'' ಎಂದು ಹೇಳಬಹುದು. ಈ ಮಹಿಳೆಯರ ಮೇಲೆ ಆಗುವಂತಹ ಪುರುಷ ಪ್ರಧಾನತ ದಬ್ಬಾಳಿಕೆ ಈಗಲೂ ಮುಂದುವರಿದಿದೆ ಎಂದರೆ ತಪ್ಪಾಗಲಾರದು. ಈಗಲೂ ಕೂಡ ಸಾಮಾಜಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ ದಬ್ಬಾಳಿಕೆ ನಡೆಯುತ್ತಲೇ ಇದೆ. ಸಾಮಾಜಿಕವಾಗಿ ಕುಟುಂಬವನ್ನು ನಿರ್ವಹಣೆ ಮಾಡುತ್ತಾ ಸಂಸಾರ ಎನ್ನುವ ಭಾರವನ್ನು ಸರಿಯಾದ ಸಂದರ್ಭದಲ್ಲಿ ತೂಗಿಸಿಕೊಂಡು ಹೋಗುವ ಜವಾಬ್ದಾರಿ ಅದು ಸ್ತ್ರೀಯರ ಮೇಲಿದೆ. ಇದರಲ್ಲಿ ಸ್ವಲ್ಪವೂ ತೊಂದರೆಯಾದರೂ ಕೂಡ ಮಹಿಳೆಯ ಮೇಲೆ ಬರುವುದು ಸತ್ಯ.

ಹೀಗೆ ಆರ್ಥಿಕವಾಗಿ ದುರ್ಬಲರಾದವರೆಂದು ಕರೆಯುವ ಮಹಿಳೆಯರ ಮೇಲೆ ದಬ್ಬಾಳಿಕೆ ಸಹಜವಾಗಿದ್ದುದೇ ಹೊರತು ಆರ್ಥಿಕವಾಗಿ ಸದೃಢವಾದಳೆಂಬಲ್ಲ ಎಂಬ ಕಾರಣಕ್ಕೆ ಪುರುಷರು ''ಮಹಿಳೆಯು ನಾಲ್ಕು ಗೋಡೆಯ

ಮಧ್ಯದಲ್ಲಿರಬೇಕು'' ಎನ್ನುವ ಕಲ್ಪನೆ ಅಂದರೆ ಮಹಿಳೆಯು ಯಾವುದೇ ವ್ಯವಹಾರದಲ್ಲಿ ಕೈಹಾಕಬಾರದೆಂಬ ನಿಲುವು ಪುರುಷರದ್ದು. ಆದರೆ ಬೆತ್ತಲೆ ಸೇವೆಯಲ್ಲಿ ಸ್ತ್ರೀಯರು ಆರ್ಥಿಕವಾಗಿ ಸದೃಢರಾದವರಲ್ಲ. ಅಂತಹ ಸಂದರ್ಭದಲ್ಲಿ ಬಡತನದಲ್ಲಿರತಕ್ಕಂತ ಅನೇಕ ಮಹಿಳೆಯರನ್ನು ಹೆತ್ತು ಅಂತಹ ಮಹಿಳೆಯರನ್ನು ಸಾಕಲಾರದೇ ಅಂತಹವರನ್ನು ದೇವದಾಸಿಯವರನ್ನು ಮಾಡುವುದು ಸಹಜವಾಗಿದೆ. ಆದರೆ ಅಂತಹ ಪದ್ಧತಿಯನ್ನು ಮುಂದುವರೆಸಿಕೊಂಡು ಬಂದರೂ ಈಗಲೂ ಇದೆ. ಏಕೆಂದರೆ ಆರ್ಥಿಕವಾಗಿ ಹಿಂದುಳಿದ ದಲಿತ ಮಹಿಳೆಯರು ಇಂತಹ ಸಂದರ್ಭಧಲ್ಲಿ ಈ ಪದ್ಧತಿಯನ್ನು ಮುಂದುವರೆಸಿಕೊಂಡು ಬಂದರೂ ಕೂಡ ಇದೊಂದು ಕೆಲಸವಾಯಿತೇ ಹೊರತು ಇಲ್ಲಿ ಹೆಣ್ಣನ್ನು ಕೀಳಾಗಿ ಅದೊಂದು ಅನುಭೋಗದ ವಸ್ತು ಎಂದು ಸೃಷ್ಟಿಸಿ ಕೇವಲ ತಮ್ಮ ಸಂತೋಷಕ್ಕಾಗಿ ಜೀವನ ಮಾಡುತ್ತಿದ್ದರು.

ಪುರುಷರು ಮಹಿಳೆಗೆ ದೈಹಿಕವಾಗಿ ದಬ್ಬಾಳಿಕೆ ಮಾಡುತ್ತಾ ತಮಗೆ ಬೇಕಾದ ರೀತಿಯಲ್ಲಿ ಅನುಭೋಗಿಸುವುದರಿಂದ ಒಂದು ಕ್ಷಣ ಮಹಿಳೆಯರಿಗೆ ತೊಂದರೆಯಾಗುತ್ತದೆ ಎಂಬುದನ್ನು ಮರೆತು ಮಹಿಳೆಯ ಮನಸ್ಸನ್ನು ಅರ್ಥಮಾಡಿಕೊಳ್ಳದೇ ವರ್ತಿಸುವ ಪುರುಷ ಸಮಾಜ ಇಲ್ಲಿದೆ ಎನ್ನಬಹುದು.

ಹೀಗೆ ಇವಷ್ಟೇ ಅಲ್ಲದೇ ಪುರುಷ ಪ್ರಧಾನ ಸಮಾಜವು ಇಷ್ಟೆಲ್ಲಾ ದಬ್ಬಾಳಿಕೆಯನ್ನು ಮಾಡುತ್ತಲೇ ಬಂದಿದೆ. ಇದು ಎಲ್ಲಿಯವರೆಗೆ ನಡೆಯತಕ್ಕಂತ ದೌರ್ಜನ್ಯ ತಿಳಿಯಬೇಕಾಗಬಹುದಾಗಿದೆ. ಇಂತಹ ದೌರ್ಜನ್ಯವನ್ನು ತಡೆಗಟ್ಟಬೇಕಾದರೆ ಸ್ತ್ರೀಯು ಎಲ್ಲ ತರಹದಲ್ಲಿ ಸದೃಢಳಾಗಬೇಕು ಎಂಬುದು ನಮ್ಮೆಲ್ಲರ ಅಭಿಪ್ರಾಯವಾಗಿದೆ.

ಕಾಪಾಡುವ ದೇವರೇ ಕೆಟ್ಟದ್ದು ಮಾಡುತ್ತಾನೆಂದರೆ ನೀವು ನಂಬುತ್ತೀರಾ? ಹೌದು ನಂಬಲೇ ಬೇಕಾದದ್ದು. ಇದು ಕಲಿಯುಗ. ಕಲಿಯುಗದಲ್ಲಿ ಏನೆಲ್ಲಾ ನಡೆಯಬಾರದ್ದು ನಡೆಯುತ್ತದೆ ಎಂಬುದು ಹಿರಿಯರ ವಾಣಿಯಾಗಿದೆ. ತಂದೆಯಿಂದ ಮಗಳ ಮೇಲಿನ ಅತ್ಯಾಚಾರ, ಸಹೋದರರಿಂದ ಸಹೋದರಿಯರ ಮೇಲೆ ನಡೆದ ಎಷ್ಟೋ ಅತ್ಯಾಚಾರಗಳಿಗೇನು ನಮ್ಮ ಭಾರತದಲ್ಲಿ ಕೊರತೆಯಿಲ್ಲ. ದೈವವನ್ನೇ ನಂಬಿ ಬಂದ ಮುಗ್ಧ ಮಹಿಳೆಯರಿಗೆ ತಮ್ಮ ಕಾಲಿನ ಹೆಬ್ಬೆರಳಿನಿಂದ ಹಣೆಗೆ ಮುತ್ತಿಡುವ ಹಲವಾರು ಮಠಾಧೀಶರಿದ್ದಾರೆ. ಹಾಗೆಯೇ ಸಾಮಾಜಿಕ, ಧಾರ್ಮಿಕ ಚೌಕಟ್ಟಿನಲ್ಲಿ ಸ್ತ್ರೀಗೆ ಕೆಲವು ವಿಶಿಷ್ಟ ಕಟ್ಟುಪಾಡುಗಳನ್ನು ಹೇರಲಾಗುತ್ತದೆ. ಸ್ತ್ರೀ ಯಾವ ಸಮಯದಲ್ಲಿ ಹೇಗಿರಬೇಕು, ಯಾರೊಡನೆ ಹೇಗೆ ವರ್ತಿಸಬೇಕು. ಅವಳ ಆಟ, ಪಾಠ, ವೇಷಭೂಷಣಗಳು, ವಿವಾಹ ಮೊದಲಾದವುಗಳಲ್ಲಿ ಸ್ತ್ರೀಗೆ ಮುಕ್ತ ಸ್ವಾತಂತ್ರ್ಯವಿರದೆ ಅದರ ಹಿಂದೆ ಪುರುಷನ ನಿರ್ದೇಶನವಿರುವುದನ್ನು ಕಾಣುತ್ತೇವೆ.

ಜನನದಿಂದ ಮರಣದವರೆಗೂ ಸ್ತ್ರೀ ಶೋಷಣೆಗೆ ಒಳಗಾಗುತ್ತಲೇ ಇರುತ್ತಾಳೆ. ಇದಕ್ಕೆ ಕಾರಣ ನಿಷೇಧಗಳೇ ಆಗಿವೆ. ಹೆಣ್ಣಿನ ಬದುಕು ಸಾರ್ಥಕವಾಗುವುದು ಸಂತಾನೋತ್ಪತ್ತಿಯ ಮೂಲಕ ಎಂಬ ವಿಚಾರವು ಸಮಾಜದಲ್ಲಿ ಆಳವಾಗಿ ಬೇರುಬಿಟ್ಟಿದೆ. ಸಂತಾನೋತ್ಪತ್ತಿಯ ಕ್ರಿಯೆ ನಡೆಯದಿದ್ದಾಗ ಕೌಟುಂಬಿಕವಾಗಿ ಮತ್ತು ಸಾಮಾಜಿಕವಾಗಿ ನಿಂದನೆಗೆ ಗುರಿಯಾಗುವಳು. ಹೆಣ್ಣು ಎಂಬುದು ಸಾಮಾಜಿಕ ಸತ್ಯವಾಗಿದೆ. ಇಲ್ಲಿ ಪುರುಷ ದೋಷದಿಂದ ಮುಕ್ತ.

ಬಂಜೆ, ಗೊಡ್ಡಿ ಎಂದು ಮಕ್ಕಳಾಗದ ಹೆಣ್ಣನ್ನು ನಿಂದಿಸುತ್ತಾರೆ. ಆದರೆ ಸಂತಾನಹೀನ ಪುರುಷ ಈ ರೀತಿಯ ಸಮಾಜದ ನಿಂದನೆಗೆ ಗುರಿಯಾಗುವುದಿಲ್ಲ. ಸಂತಾನೋತ್ಪತ್ತಿಯಲ್ಲಿ ಸ್ತ್ರೀ- ಪುರುಷರ ಪಾಲು ಸಮನಾಗಿದ್ದರೂ ಸ್ತ್ರೀ ಹೆಚ್ಚು ದೋಷಿತಳಾಗುತ್ತಾಳೆ. ಕೊನೆಗೆ ತನ್ನ ಪತಿಗೆ ತಾನೇ ನಿಂತು ಎರಡನೇ ಮದುವೆ ಮಾಡುವ ಯೋಚನೆಯಲ್ಲಿ ತೊಡಗುತ್ತಾಳೆ. ಇಲ್ಲವೆ ಈ ಹಿಂಸಾಲೋಕದಿಂದ ಮುಕ್ತಿ ಪಡೆಯಲು ಸ್ತ್ರೀ ಕಂಡ ಕಂಡ ದೇವರಿಗೆ ಹರಕೆ ಹೊತ್ತುಕೊಳ್ಳುತ್ತಾಳೆ. ಇದಲ್ಲದೆ ಹೆಣ್ಣುಮಗು ಜನಿಸಿದಾಗಲೂ ಸ್ತ್ರೀ ನಿಂದನೆಗೆ ಗುರಿಯಾಗುತ್ತಾಳೆ. ಇಂದಿಗೂ ನಮ್ಮ ಸಮಾಜದಲ್ಲಿ ಸ್ತ್ರೀ ಭ್ರೂಣ ಹತ್ಯೆಗಳು ಮತ್ತು ಶಿಶು ಹತ್ಯೆಗಳು ನಡೆಯುತ್ತಲೇ ಇವೆ.

ಹೆಣ್ಣಿನ ಶೀಲದ ಹೊರೆಯನ್ನು ಮತ್ತು ಹೆಣ್ಣಿಗೆ ಹೊಸ್ತಿಲು ದಾಟದಂತಹ ನಿರ್ಬಂಧನೆಯನ್ನು ಪಾತಿವ್ರತ್ಯದ ಹತೋಟಿಯನ್ನು ಶತಮಾನಗಳಿಂದಲೂ ಹೇರಲಾಗಿದೆ. ಹೆಣ್ಣಿನ ಬಗ್ಗೆ ಪುರುಷನಿಗೆ ಒಂದು ಸಣ್ಣ ಅನುಮಾನ, ಸಂಶಯ ಬಂದರೆ ಸಾಕು ಅವಳು ಜೀವನ ಪರ್ಯಂತ ನೋವನ್ನು ಅನುಭವಿಸಬೇಕಾಗುತ್ತದೆ. ಬಹುಪಾಲು ಸಂಪ್ರದಾಯಸ್ಥ ಕುಟುಂಬಗಳಲ್ಲಿ ವೈವಾಹಿಕ ಜಗತ್ತಿನಲ್ಲಿ ಸ್ತ್ರೀಗೆ ಆಯ್ಕೆಯ ಸ್ವಾತಂತ್ರ್ಯವೇ ಇರುವುದಿಲ್ಲ. ಹಿರಿಯರು ತೋರಿಸಿದ ವರನನ್ನು ಮದುವೆಯಾಗಲೇಬೇಕಾದ ಒತ್ತಾಯ ಸ್ತ್ರೀಯರಿಗಿರುತ್ತದೆ. ಕೇವಲ ಹಿರಿಯರೊಂದಿಗಿನ ಭಾವನಾತ್ಮಕ ಸಂಬಂಧವನ್ನು ಉಳಿಸುವ ಪರಂಪರೆಯ ಒತ್ತಡಕ್ಕಾಗಿಯೇ ಸ್ತ್ರೀಯರು ತಮ್ಮ ಅಪೇಕ್ಷಿತ ಜೀವನ ಸಂಗಾತಿಯನ್ನು ಪಡೆಯಲಾರದೆ ಹಿರಿಯರ ಮಾತನ್ನು ಅನುಸರಿಸುತ್ತಾರೆ.

ವಿವಾಹಿತ ಸ್ತ್ರೀ ಎಂದರೆ ಹಣೆಯಲ್ಲಿ ಕುಂಕುಮ, ಕೈಯಲ್ಲಿ ಬಳೆ, ಕಾಲುಂಗುರ, ಮಂಗಳಸೂತ್ರ, ಮುಡಿಯಲ್ಲಿ ಹೂ ಸದಾ ಇರಲೇಬೇಕು. ಇದು ಮುತ್ತೈದೆಯ ಲಕ್ಷಣವೆಂದು ಹೇಳುತ್ತಾರೆ. ಆದರೆ ವಿವಾಹಿತ ಸ್ತ್ರೀಗಿರುವ ಕಟ್ಟುಪಾಡುಗಳಾವುವು ಪುರುಷನಿಗಿಲ್ಲ. ಅವನು ವಿವಾಹಿತನೆಂದು ಗುರುತಿಸುವ ವಿಶೇಷತೆಗಳು ಪುರುಷನಲ್ಲಿರುವುದಿಲ್ಲ. ಸ್ತ್ರೀ ವಿಧವೆಯಾದರೆ ಅವಳ ಹಣೆಯ ಕುಂಕುಮವನ್ನು ಅಳಿಸಿ, ಮಂಗಳಸೂತ್ರವನ್ನು ತೆಗೆದು, ಬಳೆ ಒಡೆದು ಸ್ತ್ರೀಯನ್ನು ವಿಕಾರಗೊಳಿಸುತ್ತಾರೆ. ಇದರ ಹಿಂದಿನ ಉದ್ದೇಶ ಪರಪುರುಷನ ಆಕರ್ಷಣೆಗೆ ಒಳಗಾಗದಂತೆ ನೋಡಿಕೊಳ್ಳುವುದರ ಪೂರ್ವ ಯೋಜನೆ ಇದಾಗಿದೆ ಮತ್ತು ಮರು ವಿವಾಹಕ್ಕೆ ಅವಳು ಅಯೋಗ್ಯ. ಅವಳನ್ನು ಯಾವುದೇ ಪುರುಷರು ಬಯಸಕೂಡದು ಎನ್ನುವುದು.

ಬೆಳಗಿನ ಜಾವ ಎದ್ದ ಕೂಡಲೇ ವಿಧವಾ ಸ್ತ್ರೀಯ ಮುಖವನ್ನು ನೋಡಬಾರದು, ಶುಭಕಾರ್ಯಕ್ಕೆ ಹೊರಟಾಗ ವಿಧವೆ ಎದುರಿಗೆ ಬರಬಾರದು, ಶುಭ ಕಾರ್ಯಕ್ಕೆ ಮೊದಲ ಬಾರಿಗೆ ವಿಧವೆಯನ್ನು ಜೊತೆಗೆ ಕರೆದುಕೊಂಡು ಹೋಗಬಾರದು. ಮೊದಲಾದ ಧಾರ್ಮಿಕ ಚೌಕಟ್ಟಿನ ನಿಷೇಧಗಳು ಇಂದಿಗೂ ಎಲ್ಲಾ ಜಾತಿ ಸಮುದಾಯದವರು ಅನುಸರಿಸುತ್ತಲೇ ಇದ್ದಾರೆ. ಈ ರೀತಿಯ ವಿಧವೆ ಕುಟುಂಬದಲ್ಲಿ ಮತ್ತು ಸಮಾಜದಲ್ಲಿ ಅವಹೇಳನಕ್ಕೆ ಗುರಿಯಾಗುವುದರಿಂದ ಅವಳು ಮಾನಸಿಕವಾಗಿ ಕುಬ್ಜಳಾಗುತ್ತಾಳೆ. ಹೀಗೆ ಧಾರ್ಮಿಕ ನಿಷೇಧಗಳ ಹೇರಿಕೆಯಿಂದಾಗಿ ಮಹಿಳಾ ಚೈತನ್ಯ ದಮನಕಾರಿಯಾಗಿದೆ.

ಲೈಂಗಿಕತೆಯನ್ನು ಒಬ್ಬ ಗಂಡಸಿನ ಯಜಮಾನಿಕೆಗೆ ಒಳಪಡಿಸುವ ವಿವಾಹ ಸಂಸ್ಥೆಯ ಮೂಲದಿಂದಲೇ ಎಲ್ಲಾ ಸಮಸ್ಯೆಗಳು ಹುಟ್ಟು ಪಡೆಯುತ್ತವೆ. ಹೆಣ್ಣಿನ ಲೈಂಗಿಕತೆಯ ನಿರ್ಬಂಧ ಮಾತ್ರದಿಂದಲೇ ಅವಳ ಮೇಲೆ ಹಲವು ಬಗೆಯ ನಿಯಂತ್ರಣ ಹಾಗೂ ಹತೋಟಿಗಳನ್ನು ಸಾಧಿಸಲಾಗಿದೆ ಎಂಬುದಂತೂ ವಿವಾಹವು ರೂಪಿಸಿದ ಹುನ್ನಾರಗಳ ಪರಮಾವಧಿ ಹಂತವಾಗಿದೆ.' ಲೈಂಗಿಕತೆಯನುನ ಒಬ್ಬ ಗಂಡಿಸಿಗೆ ಅಧೀನ ಪಡಿಸುವುದಾದರೆ ಅದರೊಳಗಿಂದಲೇ ಗಂಡಸಿಗೆ ಮುಕ್ತ ಲೈಂಗಿಕತೆಯ ಅವಕಾಶವೂ ಕಲ್ಪಿತವಾಗುತ್ತದೆ. ಇದರಾಚೆಗೂ ದಾಟಿ ಮುಕ್ತ ಲೈಂಗಿಕತೆಯು ಗಂಡಸಿಗೆ ದಕ್ಕುವಲ್ಲಿ ವೇಶ್ಯಾವೃತ್ತಿ ಹಾಗೂ ದೇವದಾಸಿ ಪದ್ಧತಿಗಳಂತಹವನ್ನು ಹುಟ್ಟು ಹಾಕಲಾಗಿದೆ. ಲೈಂಗಿಕತೆಗೆ ಸಂಬಂಧಿಸಿದಂತೆ 'ಶೀಲ' ಎಂಬುದೊಂದನ್ನು ಕಲ್ಪಿಸಲಾಗಿದೆ. ಇದು ಹೆಣ್ಣಿಗಷ್ಟೆ ಅನ್ವಯಿಸುವ ಸಾಮಾಜಿಕ ನಿಯಮ. ಲೈಂಗಿಕತೆಯಲ್ಲಿ ಗಂಡಸೂ ಕೂಡ ನಿಷ್ಠೆ ಪ್ರಮಾಣಿಕತೆ ಹಾಗೂ ಪರಿಶುದ್ಧತೆಯಾಗಿ ಇರಲೇಬೇಕೆಂಬ ನಿಯಮವಿಲ್ಲ. ಮೂಲತಃ ಹೆಣ್ಣೊಬ್ಬಳ ಲೈಂಗಿಕತೆಯು ವಿವಾಹ ಎಂಬ ನಿಯಮದಾಚೆಗೆ ಬಳಕೆಗೊಳ್ಳಬಾರದೆಂಬ ಉದ್ದೇಶದಿಂದಲೇ ಕಲ್ಪಿತವಾದುದು. ಆಕಸ್ಮಾತಾಗಿ ಹೆಣ್ಣಿನ ಲೈಂಗಿಕತೆಯು ವಿವಾಹದ ಪರಧಿಯಾಚೆಗೆ ಬಳಕೆಗೊಂಡರೆ ಅದು ಅನೈತಿಕ ಆಗುತ್ತದೆ. ಹೆಣ್ಣು ಅಧೀನಳಾಗಿರುವುದಕ್ಕೆ ಅವಳ ದೇಹವೇ ಪ್ರಮುಖ ಕಾರಣ. ಪ್ರತ್ಯಕ್ಷವಾಗಿ ಇಲ್ಲವೆ ಪರೋಕ್ಷವಾಗಿ ಹೆಣ್ಣಿನ ದೇಹದ ಮೇಲೆ ಪುರುಷ ಪ್ರಭುತ್ವ ಸಾರಿದ್ದಾನೆ. "ಒಂದು ದಿನ ರೇಣುಕೆ ನಾರು ಮಡಿಯನ್ನುಟ್ಟು ಮಲಪ್ರಭಾ ನದಿಗೆ ನೀರು ತರಲು ಹೋದಾಗ ಅಲ್ಲಿ ತನ್ನ ಮಡದಿಯ ಸಂಗಡ ಜಲಕ್ರೀಡೆಯಾಡುತ್ತಿದ್ದ ಚಿತ್ರರಥನೆಂಬ ಗಂಧರ್ವನನ್ನು ಕಂಡು ಮೋಹಭರಿತಳಾಗಿ ಅಲ್ಲಿಯೇ ನಿಂತು ಬಿಟ್ಟಳು.ಮ ನಸ್ಸು ಚಂಚಲವಾದ ಕಾರಣ ಉಸುಕಿನ ಕೊಡ ರೂಪುಗೊಳ್ಳದೇ ಹೋಯಿತು. ಆದರೆ ಇತ್ತ ಆಶ್ರಮದಲ್ಲಿ ಪೂಜಾ ಸಮಯಕ್ಕೆ ನೀರು ತಾರದ ರೇಣುಕೆಯ ಬಗ್ಗೆ ಕೋಪಿಷ್ಠನಾದ ಪತಿ ಜಮದಗ್ನಿ ಋಷಿ ಅವಳ ಪಾತಿವ್ರತ್ಯದ ಮೇಲೆ ಸಂಶಯಿಸಿ ಮಾನಸಿಕ ವ್ಯಭಿಚಾರ ಮಾಡಿರುವ ಚಾರಿತ್ರ್ಯಹೀನ ತಾಯಿಯನ್ನು ಕೊಲ್ಲುವಂತೆ ಮಗನಾದ ಪರಶುರಾಮನಿಗೆ ಆದೇಶವಿತ್ತುತ್ತಾನೆ" ಇಲ್ಲೂ ಕೂಡ ಹೆಣ್ಣಿನ ದೇಹದ ಮೇಲೆ ಪುರುಷ ಹೇಗೆ ಪ್ರಭುತ್ವ ಸಾಧಿಸುತ್ತಾನೆ ಎನ್ನುವುದನ್ನು ಗಮನಿಸಬಹುದಾಗಿದೆ. ದೇಹ ಹೆಣ್ಣಿನದಾದರೂ, ಅದರ ಮೇಲೆ ಪುರುಷ ಪ್ರಭುತ್ವವನ್ನು ಹೊಂದುತ್ತಾನೆ. ಈವೊಂದು ಲೈಂಗಿಕತೆಯಿಂದಾಗಿ ಅಸ್ತಿತ್ವ ಇಲ್ಲವಾಗಿ ಹಾಗೂ ಅವಳು ಪ್ರಶ್ನಿಸುವ ಅಧಿಕಾರ ಕೂಡ ಇಲ್ಲದಂತಾಗುತ್ತದೆ. ಪ್ರತಿಭಟಿಸಲಾರದೆ ಮೌನವನ್ನು ತಾಳುತ್ತಾಳೆ. ಉದಾ:- ಕೋಮುಗಲಭೆಗಳು, ದಂಗೆಗಳು ಇಂತಹ ಅಮಾನುಷ ಕೃತ್ಯಗಳು ನಡೆದಾಗಲೆಲ್ಲಾ ಅಲ್ಲಿ ಬಲಿಯಾಗುವವರಲ್ಲಿ ಮಹಿಳೆ ಪ್ರಥಮಳು. ಪುರುಷರು ತಮ್ಮ ತಮ್ಮ ಕಲಹಗಳಲ್ಲಿ ಹೆಣ್ಣಿನ ದೇಹದ ಮೇಲೆ ಅತ್ಯಾಚಾರ ಮಾಡಿ ಆಕೆಯನ್ನು ಬಲಿಪಶುವನ್ನಾಗಿ ಮಾಡಲಾಗಿದೆ. ಹೆಣ್ಣಿನ ದೇಹವನ್ನು ಸರಕಾಗಿ ನೋಡಲಾಗುತ್ತದೆ. ಗಂಡನ ದಬ್ಬಾಳಿಕೆಯಿಂದ ಬಸುರಿಯ ಮೇಲೂ ಆಕ್ರಮಣ ನಡೆಸುವ ಗಂಡನ ಕೆಟ್ಟ ಚಾಳಿಯನ್ನು ಮೌನವಾಗಿ ಅನುಭವಿಸುತ್ತಾಳೆ. ಗಂಡನಿಗೆ 'ಹೆಣ್ಣು' ಭೋಗದ ವಸ್ತುವಾಗಿದ್ದಾಳೆ. ಯಾವ ನೈತಿಕ ನೆಲೆಗಳಲ್ಲಿ ಹೆಣ್ಣಿನ ಬದುಕು ಇರಬೇಕು ಎಂದು ಈ ಸಮಾಜ ನಿರ್ಧರಿಸಿದೆಯೋ ಅದೇ ನೈತಿಕ ನೆಲೆಗಳಲ್ಲಿಯೇ ಅವಳನ್ನು ನುಚ್ಚು ನೂರು ಮಾಡಿ ಬಿಡುವುದರ ಮೂಲಕವೇ ಅವಳನ್ನು ತನ್ನ ಸಂಪೂರ್ಣ ಹಿಡಿತಕ್ಕೆ ವ್ಯವಸ್ಥೆ ತಂದುಕೊಳ್ಳುತ್ತದೆ. ಹೆಣ್ಣಿನ ಲೈಂಗಿಕ ಅಸ್ತಿತ್ವವೇ ಮೂಲವಾಗಿ, ಅದನ್ನೇ ಅವಳ ಅಸ್ತಿತ್ವದ ಕೇಂದ್ರವಾಗಿ ಮಾಡುವುದರ ಮೂಲಕ ವ್ಯವಸ್ಥೆ ಎರಡು ರೀತಿಯ ಪ್ರಯೋಜನಗಳನ್ನು

ಪಡೆದುಕೊಳ್ಳುತ್ತದೆ. ಒಂದು, ಲೈಂಗಿಕ ವ್ಯಕ್ತಿತ್ವದಾಚೆಗಿನ ಅವಳ ಅಸ್ತಿತ್ವವನ್ನು ನಿರಾಕರಿಸುವ ಪ್ರಯತ್ನ ಇನ್ನೊಂದು, ಹೆಣ್ಣಿನ ಇಡೀ ಬದುಕನ್ನು ಸಾಮಾಜಿಕ ನಿಯಂತ್ರಣಕ್ಕೆ ಒಳಪಡಿಸುವ ಪ್ರಯತ್ನ. ಇಂದಿನ ಸರಕು ಸಂಸ್ಕೃತಿಯಲ್ಲಿ ಹೆಣ್ಣು ಗರಿಷ್ಠ ಲಾಭದ ಮೂಲ ಬಂಡವಾಳವಾಗಿ ಹೂಡಲ್ಪಟ್ಟಿರುವುದನ್ನು ನಾವು ನೋಡುತ್ತಿದ್ದೇವೆ. ಹೆಣ್ಣಿನ ದೇಹದ ಬಂಡವಾಳ ಪ್ರಕ್ರಿಯೆಯಲ್ಲಿ ಹೆಣ್ಣಿನ ಮೇಲಾಗುತ್ತಿರುವ ದೌರ್ಜನ್ಯ ಹಿಂಸೆ ಎಂದು ಗುರುತಿಸುವುದರ ಜೊತೆಗೆ ಎಲ್ಲವೂ ಸರಕಾಗುತ್ತಿರುವ ಜಾಗತಿಕ ಪ್ರಕ್ರಿಯೆಯ ಬೆಳವಣಿಗೆ ಎಂದು ಗುರುತಿಸಬಹುದು. ಅಭಿವೃದ್ಧಿಯ ಹೆಸರಿನಲ್ಲಿ ಹೆಣ್ಣಿನ ದೇಹವನ್ನು ವೃತ್ತಿಯಾಗಿ ಮಾರ್ಪಡಿಸಿರುವ ದುರಂತ. ಈ ದುರಂತದಲ್ಲಿ ಪಾಲ್ಗೊಳ್ಳುತ್ತಿರುವ ಮಹಿಳೆಯರಿಗೆ ದೇಹ ವೃತ್ತಿಯನ್ನು ಅಭಿವೃದ್ಧಿ ಮತ್ತು ವೃತ್ತಿ ಎನ್ನುವ ಮಿಥ್ಯ ಪರಿಕಲ್ಪನೆಗಳ ಭ್ರಮೆಯನ್ನು ಹುಟ್ಟಿಸಲಾಗಿದೆ. ಹೆಣ್ಣಿನ ಶೀಲದ ಹೊರೆಯನ್ನು ಮತ್ತು ಹೆಣ್ಣಿಗೆ ಹೊಸ್ತಿಲು ದಾಟದಂತಹ ನಿರ್ಬಂಧನೆಯನ್ನು ಪಾತಿವ್ರತ್ಯದ ಮೂಲಕ ಹತೋಟಿಯನ್ನು ಶತಮಾನಗಳಿಂದಲೂ ಹೇರಲಾಗಿದೆ.

ಹೀಗೆ ಬೆತ್ತಲೆ ಪೂಜೆಯು ಈ ಮೇಲಿನ ಹಿನ್ನೆಲೆಗಳಿಂದ ಬೆಳೆದು ಹೆಣ್ಣಿನ ದೇಹವನ್ನು ಬೆತ್ತಲೆಗೊಳಿಸಿತ್ತು. ಇಲ್ಲೆಲ್ಲ ಜಾತಿಯ ಅಮಲು ಪುರುಷರ ನೆತ್ತಿಯಲ್ಲಿ ವಿಪರೀತವಾಗಿ ಕೆಲಸ ಮಾಡಿದೆ. ಜಾತಿಯ ಶಾಪ ದಲಿತ ಮಹಿಳೆಯರನ್ನು ಇಷ್ಟೆಲ್ಲ ಬಗೆಯಲ್ಲಿ ಹಿಂಸಿಸುತ್ತಿದ್ದರೂ ಅವರ ಸಾಮಾಜಿಕ ನ್ಯಾಯದ ದನಿ ಕೇವಲ ಅರಣ್ಯರೋಧನವಾಗಿದೆ. ಇಂತಹ ಮಹಿಳೆಯರ ಪರವಾದ ಉಳಿದ ಮಹಿಳೆಯರ ದನಿಯೂ ವಿಷಾದನೀಯ ಎಂದರೆ ಬಹಳ ಕ್ಷೀಣವಾಗಿದೆ. ಅಖಂಡವಾಗಿ ಎಲ್ಲ ಹೆಣ್ಣುಮಕ್ಕಳ ಮೇಲಿನ ಲೈಂಗಿಕ ಶೋಷಣೆಯನ್ನು ವಿರೋಧಿಸುವುದು ಸೂಕ್ತವೇ ಆಗಿದ್ದರೂ ಹೀಗೆ ಜಾತಿ ಮತ್ತು ಪುರುಷ ಎರಡೂ ವಿಷಗಳಿಂದ ನಲುಗಿ ಹೋಗುವ ದಲಿತ ಮಹಿಳೆಯರ ವಿಮುಕ್ತಿಗಾಗಿ ಧ್ಯಾನಿಸಿ ದೊಡ್ಡದನಿಗೆ ಬೇಕಾದ ಶಕ್ತಿಯನ್ನು ರೂಪಿಸಬೇಕಾದುದು ಎಲ್ಲ ಮಹಿಳೆಯರ ಕರ್ತವ್ಯ. ಲಿಂಗ ತಾರತಮ್ಯದಿಂದ ಹೆಣ್ಣಿನ ಮನಸ್ಸಿನ ಮೇಲಾಗುವ ಆಘಾತಗಳು, ಪರಿಣಾಮಗಳು ಅಳತೆಗೆ ಮೀರಿದವು. ಅಂತಾದ್ದರಲ್ಲಿ ಜಾತಿಯ ತಾರತಮ್ಯವೂ ಸೇರಿಕೊಂಡರೆ ಕೆಳಜಾತಿಯ ಹೆಣ್ಣುಮಕ್ಕಳ ಸ್ಥಿತಿ ಹೇಗಿರಬಹುದೆಂದು ಊಹಿಸಲಾಗದು. ಇದರಿಂದಾಗಿಯೇ ಮಹಿಳಾ ಹೋರಾಟಗಳಲ್ಲಿ ದಲಿತ ಮಹಿಳೆಯ ದನಿಗೆ ವಿಶೇಷ ಸ್ಥಾನವಿರಬೇಕಾದುದು. ಪುರುಷ ವ್ಯವಸ್ಥೆ ಎಷ್ಟೇ ಅನೈತಿಕ ಹಾಗೂ ನೀಚ ಎಂದರೆ ಅದು ಕೆಳಜಾತಿ ಹೆಣ್ಣುಮಕ್ಕಳನ್ನು ದೇವದಾಸಿಯರನ್ನಾಗಿಸಿ ದೇವಸೂಳೆಯನ್ನು ಇಟ್ಟುಕೊಳ್ಳುತ್ತದೆ. ಗರ್ಭಗುಡಿಯ ವೇಶ್ಯೆಯರು, ದೇವಾಲಯದ ವೇಶ್ಯೆಯರು, ಊರ ಸೂಳೆಯರು ಎಂಬ ವಿಂಗಡನೆಯಲ್ಲಿ ಅನುಭೋಗಿ ಲಾಲಸೆಯನ್ನು ಪುರೋಹಿತಶಾಹಿಯು ಬಿತ್ತಿದ್ದರಿಂದ ಮುಂದೆ ಅದು ಬೆಳೆದು ಬೇರೆ ಬೇರೆ ರೂಪಗಳನ್ನು ಧರಿಸಿತು. ಧರ್ಮವನ್ನು ಇಲ್ಲಿ ಧೂರ್ತತನದಲ್ಲಿ ಬಳಸಿಕೊಂಡದ್ದೇ ದೊಡ್ಡ ಅಪರಾಧವಾಯಿತು. ಈ ಹಿನ್ನೆಲೆಯಲ್ಲಿ ಮುಂದಿನ ಅಧ್ಯಾಯದಲ್ಲಿ ಹೇಗೆ ಲಿಂಗ ತಾರತಮ್ಯ ಹಾಗೂ ಜಾತಿ ವ್ಯವಸ್ಥೆಗಳೆರಡೂ ಲೈಂಗಿಕ ಶೋಷಣೆಗೆ ದಾರಿ ಹುಡುಕಿಕೊಂಡವು ಎಂಬುದನ್ನು ಧರ್ಮಶಾಸ್ತ್ರಗಳ ಮೂಲಕ ಗಮನಿಸೋಣ. ಹಿಂದೂ ಧರ್ಮ ಯಾಕೆ ಇಷ್ಟೊಂದು ಕ್ರೂರವಾಗಿ ಮಹಿಳೆಯರನ್ನು ತನ್ನ ಮನುಧರ್ಮ ಶಾಸ್ತ್ರದ ಮೂಲಕ ವಿಕೃತೀಕರಿಸಿದೆ ಎಂಬುದನ್ನು ಸಮಕಾಲೀನ ನೆಲೆಗಳಿಂದಲೂ ಪರಾಮರ್ಶಿಸಬೇಕಾಗಿದೆ.

# ಹೆಣ್ಣು ದೇಹದ ಮೇಲಿನ ಧಾರ್ಮಿಕ ನಿರ್ಬಂಧ

ಧರ್ಮವು ಪುರುಷ ರೂಪಿಯಾದುದು. ಎಲ್ಲ ಧರ್ಮಗಳ ದೇವ ಪುರುಷರು ಮಹಾ ಮಹಿಮರು ಸ್ವಯಂ ಸೃಷ್ಟಿ ಕರ್ತರು. ಯವೊಂದು ಧರ್ಮವೂ ಸ್ತ್ರೀಯರ ಮೂಲಕ ಅಸ್ತಿತ್ವಕ್ಕೆ ಈ ತನಕ ಬಂದಿಲ್ಲ. ಈಗಲೂ ಸಾಧು ಸಂತರಾಗಲು ಪುರುಷರೇ ಮುಖ್ಯವಾಗುವರೆ ವಿನಃ ಸ್ತ್ರೀ ಸಂತೆಯರನ್ನು ಗಂಭೀರವಾಗಿ ಪರಿಗಣಿಸುವುದಿಲ್ಲ. ಎಲ್ಲ ಮಠಗಳ ಜಗದ್ಗುರುಗಳು ಪುರುಷರೇ. ಸ್ತ್ರೀ ಮಠಗಳಿಗೆ ಅವಕಾಶವಿಲ್ಲ. ಧರ್ಮ ಪ್ರಭುಗಳ ಪ್ರಕಾರ ಹೆಣ್ಣು ಸಾಧನೆಗೆ ದೊಡ್ಡ ಅಡ್ಡಿ. ಗಂಡಸಿನ ಪ್ರಕಾರ ಅಥವಾ ಮಹಾ ಸ್ವಾಮೀಜಿಗಳ ಪ್ರಕಾರ 'ಸಾಧನೆ' ಎಂದರೆ ಏನು ಎಂಬುದು ಸಾಮಾಜಿಕವಾಗಿ ಖಚಿತವಾಗುವುದಿಲ್ಲ. ದೇವರಲ್ಲಿ ಲೀನವಾಗುವ ಮುಕ್ತಿಯೆ ಅವರ ಪ್ರಕಾರ ದೊಡ್ಡ ಸಾಧನೆ. ಈ ಘನ ಸಾಧನೆ ಸಾಧಿಸಲು ಹೆಣ್ಣೇಕೆ ಹಂಗಿಸಬೇಕು? ಆಕೆ ಯಾವ ರೀತಿಯಿಂದಲು ಗಂಡಸರ ಇಂತಹ ಸಾಧನೆಗೆ ಅಡ್ಡಿಪಡಿಸಲು ಸಾಧ್ಯವೇ ಇಲ್ಲ. ಹೆಣ್ಣನ್ನು ಬಿಟ್ಟು ಹೋಗಲಾಗದ ಹಾಗೂ ಚಪಲತೆಯನ್ನು ಮೀರಲಾಗದ ಹತಾಶೆಯಲ್ಲಿ ಹುಟ್ಟಿದ ಸಿಟ್ಟಿನಿಂದ ಗಂಡಸು ಹೆಣ್ಣನ್ನು ಸಾಧನೆಗೆ ಅಡ್ಡಿ ಎಂದು ಭಾವಿಸಿರಬೇಕು. ಗಂಡಸಿನ ವೀರ್ಯವತ್ತದ ಶೌರ್ಯಸಾಹಸ ಪರಾಕ್ರಮಗಳಿಗೆ ಇಂತಹ ದೌರ್ಬಲ್ಯ ಇರುವುದು ಚೋದ್ಯವಾಗಿದೆ. ತನ್ನ ದುರ್ಬಲ ಸ್ಥಿತಿಯನ್ನು ಇಲ್ಲಿ ಪುರುಷ ಹೆಣ್ಣಿನ ಮೇಲೆ ಹಾಕಿ ಅದಕ್ಕೆ ಧರ್ಮದ ಲೇಪ ಹಾಕಿದ್ದಾನೆ.

ಇಂತಹ ಪುರುಷರ ಮಹಾತ್ಮ ಮನು. ಆತನ ಮನು ಸ್ಮೃತಿಯು ಎಲ್ಲ ಸೀಮಿತ ಪುರುಷರ ಮಹತ್ವದ ಧಾರ್ಮಿಕ ಗ್ರಂಥ. ಇದು ಎಷ್ಟೊಂದು ಸುಂದರವಾಗಿ ಸ್ತ್ರೀಯರ ಮೇಲೆ ಧಾರ್ಮಿಕ ದಿಗ್ವಿಜಯವನ್ನು ಸಾಧಿಸುತ್ತದೆ ಎಂದರೆ, ಸ್ವತಃ ಮಹಿಳೆಯರೇ ಧರ್ಮದ ಭ್ರಮೆಯಲ್ಲಿ ಅದು ಹೇಳುವುದೆಲ್ಲ ಸರಿ ಎಂಬಂತೆ ಆಕ್ರಮಿಸಿಕೊಳ್ಳುತ್ತದೆ. ಮಹಿಳೆಯರ ಮೇಲಿನ ಧಾರ್ಮಿಕ ಹಲ್ಲೆ ಈ ಗ್ರಂಥದ ಮೂಲಕವೆ ಭಾರತೀಯ ಇತಿಹಾಸದಲ್ಲಿ ಉದ್ಘಾಟನೆಗೊಂಡಿದೆ. ಧರ್ಮದ ಮುಖ್ಯ ಆಶಯಕ್ಕೆ ಭಂಗ ತರುವಂತೆ ಸ್ತ್ರೀಯರ ಮೇಲೆ ಪುರೋಹಿತಶಾಹಿ ವರ್ಗದ ಸಹಕಾರದಿಂದ ಭೂ ಮಾಲೀಕ ಪುರುಷ ಸಮುದಾಯಗಳು ವಕ್ರ ಮಾನದಂಡಗಳನ್ನು ಹೇರಿವೆ. ಮನುಸ್ಮೃತಿಯ ಉಲ್ಲೇಖಗಳನ್ನು ಗಮನಿಸಿದರೂ ಸಾಕು; ಎಷ್ಟು ಪ್ರಮಾಣದಲ್ಲಿ ಪುರುಷ ಪೂರ್ವಾಗ್ರಹವು ಹತ್ಯೆ ಎಸಗಿದೆ ಎಂಬುದು ತಿಳಿಯುತ್ತದೆ. ಮನುಖ ಪುರುಷರ ಪ್ರತಿನಿಧಿಯಾಗಿದ್ದುಕೊಂಡು ಧರ್ಮದ ಹೆಸರಲ್ಲಿ ಸ್ತ್ರೀಯರಿಗೆ ಅಪಕಾರ ಎಸಗಿದ್ದಾನೆ. ಆತನ 'ನೀತಿಗಳು' ಸುಂದರವಾಗಿ ಮಹಿಳೆಯರ ಹಿತವನ್ನು ಹಿಚುಕಿಹಾಕುತ್ತವೆ. ಧಾರ್ಮಿಕ ನೀತಿಗಳಿರಬೇಕಾದುದು ಮನುಷ್ಯರ ಘನತೆಯನ್ನು ವಿಸ್ತರಿಸಲು ನೀತಿರಹಿತ ಧರ್ಮಮನುಷ್ಯ ವಿರೋಧಿಯಾದುದು. ಗಂಡಿಗೆ

ನ್ಯಾಯ ಹೆಣ್ಣಿಗೆ ಅನ್ಯಾಯ ಎಸಗುವುದು ಧರ್ಮವಲ್ಲ. ಧರ್ಮಶಾಸ್ತ್ರಗಳು ಹೆಣ್ಣಿಗೆ ತುಂಬ ಅನ್ಯಾಯ ಮಾಡಿವೆ. ಪ್ರತಿಯಾಗಿ ಮಹಿಳೆಯರು ಆಯಾ ಧರ್ಮಗಳನ್ನು ಮನ್ನಿಸಿದ್ದಾರೆಯೆ ವಿನಃ ಧರ್ಮಗಳ ವಿರುದ್ಧ ಕೇಡು ಬಯಸಲಿಲ್ಲ. ಕೊಲ್ಲುವ ನೀತಿ ನಿಯಮ ನಿರ್ಬಂಧನಗಳನ್ನೆ ಸ್ತ್ರೀ ತನ್ನ ಸೌಮ್ಯ ಸಭ್ಯತೆಯಿಂದ ಮೂಕ ಅಳಲ ದು:ಖದಿಂದ ಸ್ವೀಕರಿಸಿ ಪುರುಷ ಸಮಾಜದ ಎಲ್ಲ ಹಿಂಸೆಯನ್ನು ಒಡಲಿಗೆ ತುಂಬಿಕೊಂಡಿದ್ದಾಳೆ. ಇಂತಹ ಸಂಧರ್ಭದಲ್ಲಿ 'ಹೆಣ್ಣಾಗಿ ಹುಟ್ಟಿ ಏನು ಫಲ' ಎಂಬ ಹತಾಶೆ ಆಕೆಯ ಮನದಲ್ಲಿ ಬರುವುದುಂಟು. ಹೆಣ್ಣಾಗಿ ಜನ್ಮಿಸುವುದು ಕೂಡ ಪಾಪ ಫಲದಿಂದಂತೆ ವಂಶೋದ್ಧಾರಕ ಗಂಡು ಮಗು ಹಡೆವ ಹೆಣ್ಣು ಪುಣ್ಯವತಿ ಎಂದು ಧರ್ಮಗಳು ಹಗಲುಗನಸನ್ನು ಬಿತ್ತುತ್ತವೆ. 'ಹೆಣ್ಣು ಮಗಳ ಯಾಕೆ ಹಡೆದೆ ನನ್ನವ್ವ, ಹೆಣ್ಣಾಗಿ, ಕಣ್ಣಾಗಿ ಈ ಗಂಡಸರ ಕಣ್ಣಲ್ಲಿ ಉರಿದೊ' ಎಂಬ ಹಾಡನ್ನು ಜನಪದ ಮಹಿಳೆ ಹಾಡಿಕೊಂಡಿರುವುದು ಧರ್ಮದ ಬಲೆಯೊಳಗೆ ಹೆಣ್ಣು ನಲುಗಿ ಯಾವ ಬಗೆಯ ಪ್ರತಿರೋಧವನ್ನು ಕಂಡು ಕೊಂಡಿದ್ದಳೆಂಬುದನ್ನು ಈ ತನಕ ವಿವರವಾಗಿ ಬಿಡಿಸಿ ನೋಡಲು  ಸಾಧ್ಯವಾಗಿಲ್ಲ. ಬೆತ್ತಲೆ ಪೂಜೆಯಲ್ಲಿ ಮೈಮರೆತು ಭ್ರಮೆಗಳಿಗೆ ಒಳಗಾದ ಹೆಣ್ಣಿನ ಮನಸ್ಸಿನಂತೆಯೆ ಧರ್ಮದ ಸುಂದರ ನಿರ್ಬಂಧಗಳಿಗೆ ಮೇಲ್‌ಜಾತಿಗಳ ಹೆಣ್ಣು ಮಕ್ಕಳ ಮನಸ್ಸು ಕೂಡ ಕುರುಡಾಗಿರುವುದನ್ನು ಗಮನಿಸಬಹುದು.  ಮಹಾಭಾರತ, ರಾಮಾಯಣ ಕಾವ್ಯಗಳು ಕೂಡ ಹೆಣ್ಣಿನ ವಿಚಾರದಲ್ಲಿ ತಪ್ಪು ಮಾಡಿವೆ. ಸ್ವತ: ಮಹಾ ಮಹಿಮ ಪುಣ್ಯ ಪುರುಷರ ಧಾರ್ಮಿಕ ನಡತೆಯು ಭಯ ಹುಟ್ಟಿಸುವಂತಿದೆ. ಕಾಯುವ ದೇವರೆ ಕೊಲ್ಲುವಂತಾದರೆ ಹೆಣ್ಣಿನ ಆತನ ಕರೆ ಯಾರ ಹೃದಯಕ್ಕೆ ತಟ್ಟಬೇಕು ಎಂಬ ಹೆಣ್ಣಿನ ಅಳಲು ಶತಮಾನಗಳಿಂದಲೂ ಹಾಗೇ ಕೇಳಿಸುತ್ತಲೆ ಬಂದಿದೆ.

ಮನುಸ್ಮೃತಿಯ ನಿರ್ಭಂಧಗಳ ಕೋಟೆಯಲ್ಲಿ ಬಂಧಿಯಾದ ಹೆಣ್ಣಿನ ಆಸೆ ಆಕಾಂಕ್ಷೆಗಳನ್ನು ಅರಿಯುವ ವಾತಾವರಣವಿಲ್ಲದೇ ಹೋದರೆ ಅಂತಹ ಸಾಮಾಜಿಕ ಪರಿಸರವು ಪಾಪಕೂಪವೇ ಆಗುತ್ತದೆ. ಪಾಪಪ್ರಜ್ಞೆಯಾದರೂ ಪುರುಷ ಸಮಾಜಕ್ಕೆ ಇಲ್ಲ. ತಾನು ಮಾಡಿದ ನೀತಿ ನಿಯಮಗಳೇ ಶ್ರೇಷ್ಠ ಎಂದು ಅಹಂನಿಷ್ಠತೆಯಲ್ಲಿ ಹೆಣ್ಣಿನ ಸವಾರಿ ಮಾಡುವ ಗಂಡಸಿನ ನಡತೆಯು ನಾಗರೀಕವಾದುದಲ್ಲ. ಮನು ಅಂತಹ ಅನಾಗರೀಕ ಸಂಹಿತೆಯನ್ನು ರೂಪಿಸಿದ್ದನ್ನು ಹಿನ್ನೆಲೆಯಾಗಿ ಇಟ್ಟುಕೊಂಡು ಹೇಗೆ ಧಾರ್ಮಿಕ ಅಂಧಕಾರವು ಹೆಣ್ಣಿನ ಸುತ್ತ ಆವರಿಸಿದೆ ಎಂಬುದನ್ನು ಈ ಅಧ್ಯಾಯದಲ್ಲಿ ಪರಿಶೀಲಿಸುವ. ಹಾಗೆಯೇ ಅದೇ ಹಂತದಲ್ಲಿ ಇಂತಹ ಧಾರ್ಮಿಕ ನಿರ್ಭಂಧದ ಹಿಂದಿರುವ ಪುರುಷ ಗರ್ವದ ಪ್ರಾಬಲ್ಯವನ್ನು ವಿಶ್ಲೇಷಿಸುವ ಮೊದಲಿಗೆ ಹೇಗೆ ಮನುಸ್ಮೃತಿಯ ಸೂತ್ರಗಳು ಆಲಂಕಾರಿಕವಾಗಿ ಹೇಳಲ್ಪಟ್ಟಿವೆ ಎಂಬುದನ್ನು ಗಮನಿಸೋಣ.

"ಬಾಲಾಯುವಾಯುವತ್ಯಾವಾ ವೃದ್ಧಯಾವಾಪಿ ಯೋಷಿತಾ ।
ನ ಸ್ವಾತಂತ್ರ್ಯೇಣ ಕರ್ತವ್ಯಂ ಕಿಂಚಿತ್ಕಾರ್ಯಂ ಗೃಹೇಷ್ವಪಿ ॥"

(ಶ್ಲೋಕ ೫.೧೪೨)

ಬಾಲಕಿಯಿದ್ದಾಗಲಾಗಲೀ, ಯುವತಿಯಾದಾಗಲಾಗಲೀ, ಮುದುಕಿಯಿದ್ದಾಗಲಾಗಲೀ ತಾನೇ ಇಚ್ಚೆಪಟ್ಟು ಸ್ವತಂತ್ರವಾಗಿ ಯಾವ ಕೆಲಸ ಕಾರ್ಯವನ್ನು ಕೈಗೆತ್ತಿಕೊಂಡು ಮಾಡಬಾರದು ಎಂದು ಮನುಸ್ಮೃತಿಯು ಹೆಣ್ಣಿಗೆ ನಿಬಂಧನೆಯನ್ನು ಹೇರಿದೆ.

"ಬಾಲ್ಯೇ ಪಿತುರ್ವಶೇತಿಷ್ಟೇ ತ್ಪಾಣಿಗ್ರಾಹಸ್ಯ ಯೌವನೇ ।
ಪುತ್ರಾಣಾಂ ಭರ್ತರಿ ಪ್ರೇತೇನ ಭಜೇತ್ ಸ್ತ್ರೀ ಸ್ವತಂತ್ರ ತಾಂ ॥"

( ಶ್ಲೋಕ ೫.೧೪೮)

ಬಾಲ್ಯದಲ್ಲಿ ತಂದೆಯಿಂದಲೂ, ಯೌವ್ವನದಲ್ಲಿ ಪತಿಯಿಂದಲೂ, ವೃದ್ಧಾಪ್ಯದಲ್ಲಿ ಮಕ್ಕಳಿಂದಲೂ ರಕ್ಷಿಸಲ್ಪಡಬೇಕು. ಅದಲ್ಲದೇ ಅವಳು ಸ್ವತಂತ್ರವಾಗಿ ಬದುಕ ಬೇಕಾದ ಅವಶ್ಯಕತೆಯಿಲ್ಲ ಎಂದು ಮನುಸ್ಮೃತಿ ಹೇಳುತ್ತದೆ.

"ಪಿತ್ರಾ ಭತ್ರಾ್ರ ಸುತೈರ್ವಾಪಿ ನೇಚ್ಛೇದ್ವಿರಹಮಾತ್ಮನಃ ।
ಏಷಾಂಹಿವಿರಹೇಣ ಸ್ತ್ರೀ ಗರ್ಹ್ಯೇ ಕುರ್ಯಾದುಭೇಕುಲೇ. ॥ "

(ಶ್ಲೋಕ ೫.೧೪೯)

ತಂದೆ, ಗಂಡ ಹಾಗೂ ಮಕ್ಕಳನ್ನು ಬಿಟ್ಟು ಸ್ತ್ರೀಯಾದವಳು ಒಬ್ಬಳೇ ಇರುವಂತಿಲ್ಲ. ಏಕೆಂದರೆ ಆವಳು ಹಾಗೊಂದು ಪಕ್ಷ ಒಂಟಿಯಾಗಿದ್ದರೆ ಪರ ಪುರುಷನ ಆಕ್ರಮಣಕ್ಕೆ ಒಳಗಾಗ ಬೇಕಾಗುತ್ತದೆ. ಇದರಿಂದ ತಂದೆಯ ಮನೆಗೂ, ಗಂಡನ ಮನೆಗೂ ಕೆಟ್ಟ ಹೆಸರು ಬರುವ ಸಾಧ್ಯತೆ ಇರುತ್ತದೆ.

"ಸದಾ ಪ್ರಹೃಷ್ಟಯಾಭಾವ್ಯಂ ಗೃಹಕಾರ್ಯೇಷು ದಕ್ಷಯಾ ।
ಸುಸಂಸ್ಕೃತೋಪಸ್ಕಂಯಾ ವ್ಯಯೆ ಚಾಮುಕ್ತ ಹಸ್ತಯಾ ॥"

(ಶ್ಲೋಕ ೫.೧೫೦)

ಹೆಣ್ಣು ಮನೆಯಲ್ಲಿ ಸದಾಕಾಲವೂ ಸಂತೋಷದಿಂದ ಇರಬೇಕು. ಮನೆಗೆಲಸದಲ್ಲಿ ಪ್ರವೀಣಳಾಗಿರಬೇಕು. ಒಪ್ಪ ಓರಣ ಮಾಡುವುದರಲ್ಲಿ ನುರಿತವಳಾಗಿರಬೇಕು. ಖರ್ಚಿನಲ್ಲಿ ಹಿಡಿತವನ್ನೊಂದಿರ ಬೇಕಾಗುತ್ತದೆ.

**"ಯಸ್ಮೈದದ್ಯಾತ್ಪಿತಾತ್ವೇನಾಂ ಭ್ರತಾವಾನುಮತೇ ಪಿತುಃ ।**

**ತಂ ಶುಶ್ರೂಷೇತ ಜೀವಂತಂ ಸಂಸ್ಥಿತಂ ಚನಲಂಘಯೇಲ್" ॥**

**(ಶ್ಲೋಕ: ೫.೦೫೦)**

ತಂದೆ, ಸಹೋದರರು ಹೆಣ್ಣನ್ನು ಮದುವೆ ಮಾಡಿದ ಮೇಲೆ ತನ್ನ ಗಂಡ ಬದುಕಿದ್ದಾಗ ಯಾವ ರೀತಿ ವಿಧೇಯಳಾಗಿರುತ್ತಾಳೋ ಅದೇ ರೀತಿ ತನ್ನ ಗಂಡ ಸತ್ತ ಮೇಲೂ ಕೂಡ ಅವನಿಗೆ ಮಾತು ಕೊಟ್ಟಂತೆಯೆ ನಡೆದು ಕೊಳ್ಳಬೇಕು.

ಸ್ತ್ರೀಯರಿಗೆ ಒಳ್ಳೆಯದಾಗಬೇಕೆಂಬ ಸದುದ್ದೇಶದಿಂದ ವಿವಾಹದ ಸಮಯದಲ್ಲಿ ಸ್ವಸ್ತಿವಾಚನ, ಪ್ರಜಾಪತಿ ಹೋಮಗಳನ್ನು ಮಾಡುತ್ತಾರೆ. ವಿವಾಹದ ಸಮಯದಲ್ಲಿ ಕನ್ಯಾದಾನ ಮಾಡಿದರೆ ಗಂಡನಾದವನಿಗೆ ಅವಳ ಮೇಲೆ ಸಂಪೂರ್ಣ ಅಧಿಕಾರವಿರುತ್ತದೆ. ಹೀಗೆ ಮದುವೆಯಾದ ಬಳಿಕ ಗಂಡನಾದವನು ತನ್ನ ಪತ್ನಿಯನ್ನು ಸದಾ ಸಂತೋಷ ಪಡಿಸುತ್ತಾ ಪ್ರತಿ ನಿತ್ಯವು ಅವಳಿಗೆ ಸುಖ ಕೊಡಬೇಕು.

**"ವಿಶೀಲ: ಕಾಮಾವೃತ್ತೋವಾಗುಣೈರ್ವಾ ಪರಿವರ್ಜಿತ: ।**

**ಉಪಚರ್ಯ: ಸ್ತ್ರೀಯಾ ಸಾಧ್ವ್ಯಾಸತತಂ ದೇವವತ್ಪತಿ : ॥"**

**(ಶ್ಲೋಕ ೫.೧೫೪)**

ಗಂಡನಾದವನ ನಡತೆಯಲ್ಲಿ ಕೆಟ್ಟತನವಿದ್ದರೂ, ಪರಸ್ತ್ರೀಯರಲ್ಲಿ ಮನಸಿಟ್ಟರೂ, ದುಷ್ಟಸ್ವಭಾವದವನಾದರೂ,ವಿಷಯ ಲಂಪಟತನದವನಾದರೂ ಒಳ್ಳೆಯ ಗುಣವಂತೆಯಾದ ಪತ್ನಿಯು ತನ್ನ ಗಂಡನನ್ನು ದೇವರೆಂದು ಭಾವಿಸಿ ಆತನನ್ನು ಗೌರವಿಸಬೇಕು.

**"ನಾಸ್ತಿಸ್ತ್ರೀಣಾಂ ಪೃಥಗ್ಯಜ್ಞೋನವ್ರತಂ ನಾಪ್ಯು ಪೋಷಿತಂ ।**

**ಪತಿಂಶುಶ್ರೂಷತೇ ಯೇನ ತೇನ ಸ್ವರ್ಗೇ ಮಹಿಯತೇ. "॥**

**(ಶ್ಲೋಕ ೫.೧೫೫)**

'ಪತಿಯೆ ಪರದೈವ', ಅವನನ್ನು ಬಿಟ್ಟು ಪತ್ನಿಗೆ ಬೇರೆ ಯಾವ ಪೂಜೆ, ವ್ರತ, ಉಪವಾಸವಿಲ್ಲ. ಮೊದಲು ಪತಿವ್ರತಾಭಾವದಿಂದ ಗಂಡನ ಸೇವೆ ಮಾಡುವುದರಿಂದಲೇ ಸ್ತ್ರೀಗೆ ಮೋಕ್ಷ ದೊರೆಯುತ್ತದೆ.

ಧರ್ಮವಂತೆಯಾದ ಪತಿವ್ರತಾ ಪತ್ನಿಯು ತನ್ನ ಗಂಡ ಬದುಕಿದ್ದಾಗಲಾಗಲೀ, ಅಥವಾ ಸತ್ತ ಮೇಲಾಗಲೀ ಅವನ ಇಷ್ಟಕ್ಕೆ ವಿರುದ್ಧವಾಗಿ ಯಾವ ತಪ್ಪನ್ನು ಮಾಡಬಾರದು. ಪತ್ನಿಯಾದವಳು ಬದುಕಿದ್ದಾಗಲೇ ಪತಿ ತೀರಿಕೊಂಡರೆ ಹಣ್ಣು-ಹಂಪಲು-ಗೆಡ್ಡೆ-ಗೆಣಸು ತಿನ್ನುತ್ತಾ ತನ್ನ ದೇಹದ ಆಮಿಷಗಳನ್ನು ಕಡಿಮೆ ಮಾಡಿಕೊಳ್ಳಬೇಕು. ಪರ ಪುರುಷನ ಹೆಸರನ್ನು ಕೂಡ ಎತ್ತದೆ ವ್ರತಾಚಾರಣೆಯನ್ನು ಮಾಡುತ್ತಾ ಧರ್ಮವನ್ನು ಕಾಪಾಡಿಕೊಳ್ಳಬೇಕು. ಗಂಡ ಸತ್ತಮೇಲೂ ಕೂಡ ತನಗೆ ಮಕ್ಕಳಿಲ್ಲದಿದ್ದರೂ ಸರಿಯೇ ಪರಪುರುಷನ ಸಂಗ ಮಾಡದೆ ಬ್ರಹ್ಮಚಾರಿಣಿಯಂತೆ ಇದ್ದರೆ ಆಕೆಗೆ ಸದ್ಗತಿ ಖಂಡಿತ ಎಂದು ಮನುಸ್ಮೃತಿ ಹೇಳುತ್ತದೆ. ಮಕ್ಕಳ ಮೇಲಿನ ಆಸೆಗೋಸ್ಕರ ಆಕೆ ಪರ ಪುರುಷನ ಸಂಗವನ್ನು ಯಾಚಿಸಿ ವ್ಯಭಿಚಾರವೆಸಗಿದರೆ ಅಂತಹ ಸ್ತ್ರೀಯು ಲೋಕದ ನಿಂದನೆಗೆ ಹಾಗೂ ಪರಲೋಕದಲ್ಲಿ ದುರ್ಗತಿಯನ್ನು ಕಾಣಬೇಕಾಗುತ್ತದೆ. 'ಪತಿವ್ರತೆಯಾದವಳಿಗೆ ಎಂದೆಂದಿಗೂ ಒಬ್ಬ ಪುರುಷ ಮಾತ್ರ ಗಂಡನಾಗಿರಲು ಸಾಧ್ಯ' ಎಂದು ಮನುಸ್ಮೃತಿ ಹೇಳುತ್ತದೆ. ಬಹು ಮಂದಿ ಪುರುಷರಲ್ಲಿ ಕಾಮತ್ವವನ್ನು ಹೊಂದುವ ಸ್ತ್ರೀಯು ಪಾಪ ಕೃತ್ಯದಿಂದ ಭಯಂಕರ ರೋಗಕ್ಕೆ ತುತ್ತಾಗುತ್ತಾಳೆ. ಯಾವ ಪತ್ನಿಯು ತನ್ನ ಪತಿಯನ್ನು ಮೀರಿ ಹೋಗುವುದಿಲ್ಲವೋ ಅಂತಹ ಸ್ತ್ರೀಯನ್ನು ಒಳ್ಳೆಯ ಗಂಡ, ಹೆಂಡತಿಯರೆಂದು ಲೋಕದ ಜನರಿಂದ ಹೊಗಳಿಸಿ ಕೊಳ್ಳುತ್ತಾಳೆ. ಅಂತಹವಳಿಗೆ ಸ್ವರ್ಗ ಸಿಗುತ್ತದೆ ಎಂದು ಹೇಳುವ ಮನುಸ್ಮೃತಿಯು ಗಂಡನಿಗಿಂತ ಹೆಂಡತಿಯೇ ಮೊದಲು ಸತ್ತು ಹೋದರೆ ಆಗ ಆತ ಪುನರ್ ವಿವಾಹ ಮಾಡಿಕೊಳ್ಳಬಹುದು ಎಂದು ಶ್ಲೋಕ ೫.೧೬೮ ರಲ್ಲಿ ಹೇಳುತ್ತದೆ. ಇಂತಹ ಮೌಲ್ಯಗಳನ್ನು ಈ ಮುಂದಿನ ವಿವರಗಳಲ್ಲಿ ಪರಿಶೀಲಿಸೋಣ.

ಸಮಕಾಲೀನ ಬದುಕಿನಲ್ಲಿ ಮಹಿಳೆಯರ ಪಾತ್ರಗಳು ಹಾಗೂ ಸ್ಥಾನಗಳನ್ನು ಭಯ ಹುಟ್ಟಿಸುವಂತಹ ರೀತಿಯಲ್ಲಿ ಪ್ರಭಾವಿಸುತ್ತಿರುವ ವ್ಯವಸ್ಥೆಗಳಲ್ಲಿ ಧರ್ಮವು ಒಂದು. ಹೊಸ -ಹೊಸ ರೂಪಗಳಲ್ಲಿ, ಹೊಸ-ಹೊಸ ರೀತಿಗಳಲ್ಲಿ ಧರ್ಮ ಎನ್ನುವ ವ್ಯವಸ್ಥೆ ಸ್ತ್ರೀ ವಿರೋಧಿ ಸಂಸ್ಕೃತಿಯ ಬೇರುಗಳನ್ನು ಸಮಾಜದ ಮೇಲೆ ಹರಡುತ್ತಿರುವುದಷ್ಟೇ ಅಲ್ಲದೆ, ಧಾರ್ಮಿಕ ಮೂಲಭೂತವಾದವನ್ನು ಸ್ತ್ರೀ ಸ್ವಾತಂತ್ರ್ಯ ಚಳುವಳಿಗೆ ಒಂದು ಬೃಹತ್ ಸವಾಲಾಗಿ ಎಸೆದಿದೆ. ಸಾಮಾನ್ಯಾರ್ಥದಲ್ಲಿ 'ಧರ್ಮ' ಎಂದರೆ 'ಸನ್ಮಾರ್ಗ'. ಅಂದರೆ ಸರ್ವರಿಗೂ ಒಳ್ಳೆಯದನ್ನು ಮಾಡುವಂತಹದ್ದು. ಇದಕ್ಕೆ ವಿರುದ್ಧವಾಗಿ ಎಲ್ಲ ಧರ್ಮಗಳು

'ಸ್ತ್ರೀಯನ್ನು' ಎರಡನೆ ದರ್ಜೆಯ ಪ್ರಜೆಯಂತೆ ನಡೆಸಿಕೊಳ್ಳುವಂತಹ ಪ್ರವೃತ್ತಿಗಳಿಗೆ ಚಾಲನೆ ಹೆಚ್ಚು. ಸ್ತ್ರೀಯನ್ನು ಕುರಿತ ಧರ್ಮದ ಧೋರಣೆಗಳು ದ್ವಿಮುಖ ಮೌಲ್ಯಗಳನ್ನು ಪ್ರತಿಪಾದಿಸುತ್ತಿವೆ. ಒಂದೆಡೆ ಆಕೆಯನ್ನು ದೇವತೆಯೆಂದು ಘೋಷಿಸುವುದು, ಮತ್ತೊಂದೆಡೆ ಆಕೆಯ ಮೇಲಿನ ದೌರ್ಜನ್ಯಕ್ಕೆ ಮಾನ್ಯತೆ ನೀಡುವುದು. ಇದು ಧರ್ಮದಲ್ಲಿ ಅಡಗಿರುವ ವೈರುಧ್ಯಗಳಿಗೆ ಉದಾಹರಣೆಯಷ್ಟೆ.

ಇದುವರೆಗೂ ಧರ್ಮ ಎನ್ನುವ ಸಂಸ್ಥೆ ಉದಯಿಸಿದ್ದು ಪುರುಷ ಮನಸ್ಸಿನಲ್ಲಿ, ಮತ್ತು ಅದಕ್ಕೆ ರೂಪ-ರೇಷೆ ಹಾಕಿದ್ದು ಪುರುಷರೇ. ಧಾರ್ಮಿಕ ಆಚರಣೆಗಳನ್ನು ನಿರ್ದೇಶಿಸುತ್ತಿದ್ದವರು ಬಹು ಮಟ್ಟಿಗೆ ಪುರುಷರೇ ಆದ್ದರಿಂದ ಸ್ತ್ರೀಗೆ ಎಲ್ಲ ಧಾರ್ಮಿಕ ಆಚರಣೆಗಳಲ್ಲಿ ಪಾಲ್ಗೊಳ್ಳಬಹುದು ಎಂಬ ಅಂಶಕ್ಕೆ ಅವರು ಪ್ರಾಮುಖ್ಯತೆಯನ್ನು ನೀಡಲೇ ಇಲ್ಲ. ಸ್ತ್ರೀಗೆ ಧರ್ಮಗ್ರಂಥಗಳ ಅಧ್ಯಯನ ಹಾಗೂ ವಿಶ್ಲೇಷಣೆ ಒದಗಿ ಬಂದಂತಹ ಅವಕಾಶಗಳು ಕೇವಲ ಬೆರಳೆಣಿಕೆಯಷ್ಟು ಮಾತ್ರ. ಯಾವ ಧರ್ಮಗಳು ಸ್ತ್ರೀಯರಿಗೆ ಮುಕ್ತ ಅವಕಾಶ ಕಲ್ಪಿಸಲಿಲ್ಲ. 'ಮಾತೃದೇವೋಭವ' ಎಂದು ಸಾರುವುದರ ಮೂಲಕ ಸ್ತ್ರೀಯನ್ನು ದೈವತ್ವದ ಪಟ್ಟಕ್ಕೇರಿಸಿದ ಧರ್ಮ ಆಕೆ ಸತ್ತ ಪತಿಯೊಡನೆ ಜೀವಂತವಾಗಿ ಚಿತೆಯೇರುವಂತಹ ಅಮಾನುಷ ಆಚರಣೆಗೂ ಅಂಗೀಕಾರ ನೀಡಿದೆ.

ಹಿಂದೂ ಧಾರ್ಮಿಕ ವ್ಯವಸ್ಥೆಯ ಬಗ್ಗೆ ಹೇಳುವುದಾದರೆ, ಋಗ್ವೇದ ಕಾಲದಲ್ಲಿ ಇದ್ದಂತ ಸ್ತ್ರೀಪರ ನಿಲುವುಗಳು ಕಾಲಕ್ರಮೇಣ ಸ್ತ್ರೀ ವಿರೋಧಿ ಪ್ರವೃತ್ತಿಗಳು ಹಾಗೂ ಆಚರಣೆಗಳಾಗಿ ಪರಿವರ್ತನೆಗೊಂಡವು. ಹೀಗೆ ಪುರುಷ ಪ್ರಧಾನ ಮೌಲ್ಯಗಳು ತಮ್ಮ ಪ್ರಭಾವವನ್ನು ಬೀರುತ್ತಾ ಹೋದ ಆಗೆಲ್ಲಾ ಸ್ತ್ರೀ ಸ್ಥಾನ ಇಳಿಮುಖವಾಗುತ್ತಾ ಬಂದು, ಆಕೆಯನ್ನು ಕುರಿತ ಸಾಮಾಜಿಕ ದೃಷ್ಟಿಕೋನಗಳಲ್ಲಿ ತೀವ್ರ ಸ್ವರೂಪದ ಬದಲಾವಣೆಗಳುಂಟಾದವು.

ಋಗ್ವೇದದ ಕಾಲದ ನಂತರದಲ್ಲಿ ಆರ್ಯ ಸಂಸ್ಕೃತಿಯ ಬೇರುಗಳು ಸಮಾಜದ ಉದ್ದಗಲಕ್ಕೂ ಹರಡಿ ಇಡೀ ಭರತ ಖಂಡದಲ್ಲಿ ಈ ಧಾರ್ಮಿಕ ಮೌಲ್ಯಾಚರಣೆಗಳು ಹರಡುತ್ತಿದ್ದವು. ಋಗ್ವೇದದ ಕಾಲದಲ್ಲಿ ಪುರುಷ ಪ್ರಾಧಾನ್ಯತೆಯ ಅನೇಕ ಸಂಕೇತಗಳು ಅಸ್ತಿತ್ವದಲ್ಲಿದ್ದರೂ ಅವು ಹೆಚ್ಚಾಗ ತೊಡಗಿದ್ದು ಸಂಹಿತೆಗಳ ಕಾಲದಲ್ಲಿ. ಗಂಡು ಸಂತಾನದ ಮೂಲಕ ವಂಶಾವಳಿಯನ್ನು ಗುರುತಿಸುವುದು, ಹೆಣ್ಣು ಮಕ್ಕಳಿಗೆ ಆಸ್ತಿ, ಹಕ್ಕಿನ ವಂಚನೆ, ಸ್ತ್ರೀ ಯರಿಗೆ ಶಿಕ್ಷಣದ ನಿರಾಕರಣೆ ಇವೇ ಮುಂತಾದ ಧರ್ಮ ಬೆಂಬಲಿತ ಸ್ತ್ರೀ ವಿರೋಧಿ ಪ್ರವೃತ್ತಿಗಳು ಈ ಕಾಲದಲ್ಲಿ ಬಲವಾಗಿ ಬೇರೂರಿ ಸ್ತ್ರೀಯನ್ನು ಸಕ್ರಿಯ ಸಾಮಾಜಿಕ ಆರ್ಥಿಕ ಜೀವನದಿಂದ ದೂರವಿಡುವಂತ ಪರಿಸ್ಥಿತಿ ಸೃಷ್ಟಿಯಾಯಿತು. ವಿವಾಹ ಒಂದು ಪವಿತ್ರ ಬಂಧನ ಎಂಬ ಪರಿಕಲ್ಪನೆ ಸ್ತ್ರೀಯರಿಗೆ ಮಾತ್ರ ಅನ್ವಯಿಸುವಂತಹ ವ್ಯವಸ್ಥೆಯಾಗಿ

ಮಾರ್ಪಾಡಾಗಿ ಬಾಲ್ಯವಿವಾಹ, ವಿಧವಾ ವಿವಾಹಕ್ಕೆ ನಿಷಿದ್ಧ, ಸ್ತ್ರೀ-ಪುರುಷರ ನಡವಳಿಕೆಯನ್ನು ನಿರ್ಧರಿಸಲು ದ್ವಿಮುಖ ಮಾನದಂಡ ಮತ್ತು ಪ್ರಗತಿ ವಿರೋಧಿ ಆಚರಣೆಗಳು ಎಲ್ಲೆಡೆ ಪ್ರಚಾರವಾದವು.

ಹಿಂದೂ ಧರ್ಮದ ಮಹಾಕಾವ್ಯಗಳಾದ ರಾಮಾಯಣ ಮತ್ತು ಮಹಾಭಾರತ ಗಳು ಇಂದಿಗೂ ಧಾರ್ಮಿಕ ಗ್ರಂಥಗಳೆಂದೇ ಆರಾಧಿಸಲ್ಪಡುತ್ತವೆ. ಇವು ಸ್ತ್ರೀಯ ಸ್ಥಾನವನ್ನು ಧೋರಣೆಗಳನ್ನು ಹಾಗೂ ಆಚರಣೆಗಳನ್ನು ರೂಪಿಸುವಲ್ಲಿ ಪ್ರಮುಖ ಪಾತ್ರವಹಿಸುತ್ತವೆ. ಮಹಾಭಾರತದ ದ್ರೌಪದಿಯ ಪಾತ್ರಕ್ಕಿಂತ, ರಾಮಾಯಣದ ಸೀತೆಯ ಪಾತ್ರವನ್ನು 'ಆದರ್ಶನಾರಿ'ಯ ಸ್ಥಾನವನ್ನು ಪಡೆದು ಕೊಂಡಿದ್ದಾಳೆ. ಈಕೆ ಆದರ್ಶನಾರಿಯ ಗುಣಗಳನ್ನು ಹೊಂದಿದ್ದರೂ (ಪತಿ ವಿದೇಯತೆ, ತಾಳ್ಮೆ, ಪರಾಧೀನತೆ, ಪತಿಯಲ್ಲಿ ಪ್ರಶ್ನಾತೀತತೆ ಇವು ಆದರ್ಶನಾರಿ ಗುಣ ಲಕ್ಷಣಗಳು). ಕಾಡಿನಲ್ಲಿ ಅಪಹರಣಕ್ಕೊಳಗಾದ ಸೀತೆ ತನ್ನ ಪತಿಯಲ್ಲಿ ಅಚಲವಾದ ನಂಬಿಕೆಯನ್ನು ಇರಿಸಿಕೊಂಡಿದ್ದರೂ, ರಾಮ ಆಕೆಯ ಪಾತಿವ್ರತ್ಯವನ್ನು ಪರೀಕ್ಷೆಗೆ ಒಲಪಡಿಸಿದ್ದು, ಸಹಜ ಪುರುಷನ ಹಕ್ಕು ಎಂದು ಎಲ್ಲರೂ ನಂಬುವಂತಹದ್ದು. ಅದೇ ರೀತಿ ರಾಮನಿಂದ ದೂರವಾಗಿದ್ದ ಸೀತೆ ರಾಮನನ್ನು ಏಕೆ ಇಂತಹ ಪರೀಕ್ಷೆಗೆ ಒಳಪಡಿಸಲಿಲ್ಲ? ಇಂತಹ ಪ್ರಶ್ನೆಗಳನ್ನು ಕೇಳಿದವರಿಗೆ ಉದ್ದಟರು ಎಂದು ಹೀಯಾಳಿಸಿ ಸೀತೆಯನ್ನು ಪೂಜ್ಯ ಸ್ಥಾನದಲ್ಲಿರಿಸಿದ್ದಾರೆ. ಇಲ್ಲಿ ಸ್ತ್ರೀಗೆ ವೈಭವೀಕರಿಸಿದೆ. ಆದರೆ ಮಹಾಭಾರತದ ದ್ರೌಪತಿಗೆ ಈ ರೀತಿ ವೈಭವೀಕರಿಸಿಲ್ಲ.

ಧರ್ಮ ಶಾಸ್ತ್ರಗಳ ಕಾಲದಲ್ಲಂತೂ ಸ್ತ್ರೀ ಸ್ಥಿತಿ ಮತ್ತಷ್ಟು ಇಳಿಮುಖವಾಯಿತು. ದ್ವಿಮುಖ ನಿಲುವುಗಳಿಂದ ಕೂಡಿದಂತಹ ಮನುಸ್ಮೃತಿಯಲ್ಲಿ, ಒಂದೆಡೆ ಸ್ತ್ರೀಯನ್ನು ಅತಿಯಾದ ಗೌರವದಿಂದ ಕಾಣುವಂತೆ ಸೂಚಿಸುವುದು, ಮತ್ತೊಂದೆಡೆ ಆಕೆಯನ್ನು ಸ್ವಂತ ವ್ಯಕ್ತಿತ್ವವೇ ಇಲ್ಲದಂತ ವ್ಯಕ್ತಿಯಾಗಿ ಪರಿಗಣಿಸುವುದು ಕಂಡುಬರುತ್ತದೆ. ಆದರೆ ಪುರುಷ ಪ್ರಧಾನ ಸಾಮಾಜಿಕ ವ್ಯವಸ್ಥೆ ತನಗೆ ಅನುಕೂಲವಾಗುವಂತಹ ಸಲಹೆ ಸೂಚನೆಗಳನ್ನು ಮಾತ್ರ ಸ್ವೀಕರಿಸಿ, ಧರ್ಮ ಶಾಸ್ತ್ರಗಳಲ್ಲಿ ಅಲ್ಲಲ್ಲಿ ಕಂಡು ಬರುವ ಸ್ತ್ರೀ ಪರವಾದ ಮೌಲ್ಯಗಳನ್ನು ಏತಕ್ಕಾಗಿ ಉಪೇಕ್ಷಿಸಿದೆ? ಸ್ತ್ರೀಯರ ಪಾತಿವ್ರತ್ಯವನ್ನು ವೈಭವೀಕರಿಸಿದ ಧಾರ್ಮಿಕ ಗ್ರಂಥಗಳು, ಪುರುಷರ ಮೇಲೆ ಇದೇ ನಿರ್ಬಂಧ ಹೇರಲ್ಲಿಲ್ಲವೇಕೆ? ಪತ್ನಿ ಮರಣ ಹೊಂದಿದರೆ ಪತಿಗೆ ಮರು ವಿವಾಹ ಮಾನ್ಯ, ಆದರೆ ಎಷ್ಟೇ ಕಡಿಮೆ ವಯಸ್ಸಿನಲ್ಲಿ ವೈಧವ್ಯ ಪ್ರಾಪ್ತಿಯಾದರೂ ಸ್ತ್ರೀಗೆ ಮಾತ್ರ ಮರು ವಿವಾಹ ನಿಷೇಧವೇಕೆ? ಪುರುಷನಿಗೆ ಪ್ರಾಪ್ತವಾಗಬಹುದ್ದಾದ ಜ್ಞಾನ ಸ್ತ್ರೀಗೆ ಏಕೆ ಅಲಭ್ಯ? ಇವೇ ಮುಂತಾದ ಪ್ರಶ್ನೆಗಳನ್ನು ಎತ್ತಿದವರ ಸಂಖ್ಯೆ ಕಡಿಮೆ. ಇಂದಿಗೂ ಈ ಪ್ರವೃತ್ತಿಗಳು ಧರ್ಮ ಬೆಂಬಲಿತವೆಂಬ

ಮಾನ್ಯತೆಯನ್ನು ಪಡೆದಿರುವುದರಿಂದ, ಸಮಾಜದ ಉದ್ವೇಗಗಲಕ್ಕೂ ಅವುಗಳ ಪ್ರಭಾವ ಹರಡಿವೆ.

ಒಂದೆಡೆ ಆಧುನಿಕತೆಯ ತುತ್ತ ತುದಿಯನ್ನು ಮುಟ್ಟುತ್ತಿದ್ದೇವೆವೆಂಬ ಗರ್ವ ನಮ್ಮದಾದರೆ, ಧಾರ್ಮಿಕ ಮೂಲಭೂತವಾದ ವಿವಿಧ ರೂಪಗಳಲ್ಲಿ ಹೆಡೆಯೆತ್ತಿ ಕುಣಿಯುತ್ತಿದೆ ಎಂಬ ಕಟು ಸತ್ಯವನ್ನು ಒಪ್ಪಿಕೊಳ್ಳುವಂತಹ ಪರಿಸ್ಥಿತಿಯೂ ನಮ್ಮದೇ. ಸತಿ, ವರದಕ್ಷಿಣೆ ಸಾವು, ಕೌಟುಂಬಿಕ ಕ್ರೌರ್ಯ, ಹೆಣ್ಣು ಸಂತಾನದ ಕೊಲೆ, ಬಾಲ್ಯವಿವಾಹ, ಸ್ತ್ರೀ ಅನಕ್ಷರತೆ ಇವೇ ಮುಂತಾದ ಪಾಶವೀ ಕೃತ್ಯಗಳಿಗೆಲ್ಲ ಧಾರ್ಮಿಕ ಮೂಲಭೂತವಾದಿಗಳ ಬೆಂಬಲವಿದೆ. ಇವುಗಳ ವಿರುದ್ಧ ಹಲವಾರು ಚಳುವಳಿ ಬಂಡಾಯ ಹೂಡಿದವರು ಮುಂದಾದರೆ, ಈ ಧರ್ಮ ಮೂಲ ಭೂತವಾದಿಗಳ ಆರ್ಭಟದಲ್ಲಿ ಅವರ ಕೂಗೂ ಮಾಯವಾಗಿ ಬಿಡುತ್ತದೆ. ಪುರೋಹಿತ ಜನ ತನ್ನ ಸ್ವಾರ್ಥ ಸಾಧನೆಗೆಗಾಗಿ ಸುಖದ ಸುಪ್ಪತ್ತಿಗಾಗಿ ಉದಾತ್ತ ವಿಚಾರಗಳನ್ನು ವೇದ ಉಪನಿಷತ್ತುಗಳನ್ನು ತಿರುಚಿ, ಶಾಸ್ತ್ರ ಪುರಾಣಗಳನ್ನು ದಾಸ್ಯದ ಕಥೆಗಳಿಂದ ತುಂಬಿದಂತೆ ವೇದೋಪನಿಷತ್ತುಗಳನ್ನು ಹಾಳುಗೆಡವಿದರು. ಸ್ಮೃತಿಗಳ ಮೂಲಕ ಚಾತುರ್ವರ್ಣ್ಯ ಭದ್ರಪಡಿಸಿ ಕರ್ಮಸಿದ್ಧಾಂತ ತಂದು ಸರ್ವರ ನಾಲಿಗೆ ಎತ್ತದಂತೆ ಮಾಡಿದರು. ಇಂತಹ ಅಮಾನುಷ ಕೃತ್ಯಗಳನ್ನು ನಮ್ಮ ಹಿಂದೂ ಧರ್ಮದ ಶಾಸ್ತ ಪುರಾಣಗಳಂತೂ ಈ ಕಾರಣಕ್ಕಾಗಿಯೇ ಸೃಷ್ಟಿಸಿದರು. ರಾಮಾಯಣ ಮಹಾಭಾರತದಲ್ಲಂತೂ ಇಂತಹ ಅಂಶಗಳನ್ನು ಕಾನೂನುಗಳಂತೆ ತುಂಬಿ ಬಿಟ್ಟರು.

ಮಹಾಭಾರತದಲ್ಲಿ ಶ್ರೀ ಕೃಷ್ಣನು ತನ್ನ ತಂಗಿಯಾದ ಸುಭದ್ರೆಯ ಮದುವೆಯಲ್ಲಿ ಅನೇಕ ಬೆಲೆ ಬಾಳುವ ವಸ್ತುಗಳ ಜೊತೆಗೆ ಒಂದು ಸಾವಿರ ಹೊಳೆಯುವ ಮೈ ಕಾಂತಿಯ ಗುಂಗುರು ಕೂದಲಿನ, ಬಂಗಾರದ ಒಡವೆಗಳನ್ನು ಧರಿಸಿದ ಸೇವಕಿಯರನ್ನು ಅರ್ಜುನನಿಗೆ ವರದಕ್ಷಿಣೆಯಾಗಿ ನೀಡಿದನು. ಎಂಬ ಸನ್ನಿವೇಶ ಮಹಾಭಾರತದ ಆದಿಪರ್ವದಲ್ಲಿ ಬರುತ್ತದೆ. ಇಲ್ಲಿ ಪುರುಷರು ಸ್ತ್ರೀಯನ್ನು ಯಾವ ರೀತಿಯಾಗಿ ಶೋಷಿಸುತ್ತಿದ್ದಾರೆ ಎಂಬುದು ವ್ಯಕ್ತವಾಗುತ್ತದೆ. ದೇವರಿಗೆ ಸಮವಾದಂತಹ ಶ್ರೀಕೃಷ್ಣನೇ ಒಂದು, ಇಂತಹ ದಾಸ್ಯ ವ್ಯವಸ್ಥೆಗೆ ಕೈಹಾಕಿದರೆ, ಮತ್ತೊಂದು ಕಡೆ ಅದೇ ಸ್ತ್ರೀಯ ಮಾನ ಅಥವಾ ಶೀಲವನ್ನು ಕಾಪಾಡುತ್ತಾನೆ. ದ್ರೌಪದಿಯ ವಸ್ತ್ರಾಪಹರಣದ ಸನ್ನಿವೇಶದಲ್ಲಿ.

ಅದೇ ರೀತಿಯಾಗಿ ಮತ್ತೊಂದು ಸನ್ನಿವೇಶದಲ್ಲಿ ಋಷಿಗಾವನು ರಾಜ ಯಯಾತಿಯ ಬಳಿಗೆ ಹೋಗಿ ದಾನವನ್ನು ಕೇಳುವ ಪ್ರಸಂಗದಲ್ಲಿ ಋಷಿಯು ತನ್ನ ಗುರು ವಿಶ್ವಾಮಿತ್ರನಿಗೆ ಕಾಣಿಕೆಯಾಗಿ ಕೊಡಲು 800 ಕುದುರೆಗಳನ್ನು ಬೇಕೆಂದು ಕೇಳಿದನು.ರಾಜ ಯಯಾತಿಯು ಕುದುರೆಗಳ ಬದಲಿಗೆ ತನ್ನ ಮಗಳಾದ ಮಾಧವಿಯನ್ನು ಅವನಿಗೆ ಒಪ್ಪಿಸಿ

ಇವಳು ಮೂರು ಲೋಕದ ಪುರುಷರು ಬಯಸುವಷ್ಟು ಸುಂದರಿಯೂ ಗುಣವತಿಯೂ ಆಗಿದ್ದಾಳೆ. ಇವಳನ್ನು ಮಾರಿ ಕುದುರೆಗಳನ್ನು ಪಡೆದು ಗುರುದಕ್ಷಿಣೆಯಾಗಿ ಒಪ್ಪಿಸು ಎಂದು ಹೇಳಿದನು. ಆಗ ಗಾವಲನು ಇಕ್ಷ್ವಾಕು ರಾಜನಲ್ಲಿಗೆ ಮಾಧವಿಯನ್ನು ಒಪ್ಪಿಸಿ 200 ಕುದುರೆಗಳನ್ನು ಪಡೆದನು. ಇಕ್ಷ್ವಾಕು ಮಾಧವಿಯಲ್ಲಿ ಸಂತಾನವನ್ನು ಪಡೆದ ಬಳಿಕ ಗಾವನು ಮಾಧವಿಯನ್ನು ಪುನಃ ಕರೆದುಕೊಡು ದಿವೋದಾಸನಲ್ಲಿಗೆ ಹೋದನು. ಆತನಿಂದಲೂ 200 ಕುದುರೆಗಳನ್ನು ಪಡೆದು ನಂತರ ಔಶೇನ ರಾಜನಿಂದ 200 ಕುದುರೆಗಳನ್ನು ಪಡೆದು ಈ ಒಟ್ಟು 600 ಕುದುರೆಗಳನ್ನು ಮಿಕ್ಕ 200 ಕುದುರೆಗಳಿಗೆ ಬದಲಾಗಿ ಮಾಧವಿಯನ್ನು ವಿಶ್ವಾಮಿತ್ರನಿಗೆ ಒಪ್ಪಿಸಿದನು. ಈ ರೀತಿಯ ಅಮಾನುಷ ಕೃತ್ಯಗಳನ್ನು ಈ ನಮ್ಮ ಹಿಂದೂ ಧರ್ಮದ ಗ್ರಂಥಗಳಲ್ಲಿ ಕಾಣಬಹುದಾಗಿದೆ. ಈ ಒಂದು ಹೆಣ್ಣು ವ್ಯಾಪಾರದ ವಸ್ತುವಾಗಿ ಪತಿವ್ರತೆಗೆ ಬೆಲೆ ಕೊಡದೆ, ಅವಳನ್ನು ಬಳಸಿಕೊಂಡಿರುವುದು ವ್ಯಕ್ತವಾಗುವುದು.

ಹಿಂದೂ ಧರ್ಮ ಸ್ತ್ರೀ ಸಮಾಜವನ್ನು ಅಂದರೆ ಸ್ತ್ರೀಯರನ್ನು ಕೇವಲ ಭೋಗದ ವಸ್ತುವಾಗಿ ಪರಿಗಣಿಸಿದೆ. ಈ ದೇವದಾಸಿ ಪದ್ಧತಿಯಲ್ಲಂತೂ ನಾವು ಬಹಳಷ್ಟು ಅಮಾನುಷ ಕೃತ್ಯಗಳನ್ನು ನೋಡಬಹುದಾಗಿದೆ. ಈ ಸ್ತ್ರೀಯನ್ನು ಮನೆತನದ ಉಳಿಸುವಿಕೆಗಾಗಿ ಒಂದು ರೀತಿಯ ದೇವದಾಸಿಯಾಗಿ ಬಿಡುವುದು. ದೇವರ ಹರಕೆಯ ಕೋರಿಕೆಯ ಬಗ್ಗೆ ದೇವದಾಸಿಯರನ್ನಾಗಿ ಮಾಡುವುದು . ಆದರೆ ಈ ಪುರುಷ ಪ್ರಧಾನ ಸಮಾಜ ಇಂತಹ ಹೆಣ್ಣುಗಳನ್ನು ಒಳ್ಳೆಯ ದೃಷ್ಟಿಯಿಂದ ನೋಡದೇ ಕಾಮುಕತೆಯ ದೃಷ್ಟಿಯಿಂದ ಹೆಣ್ಣಿನ ಶೀಲದ ವಂಚನೆಗೆ ಮುಗಿ ಬಿದ್ದಿರುವುದು ಇಂದಿಗೂ ಕಂಡು ಬರುತ್ತದೆ. ಪುರುಷನ ಬಲತ್ಕಾರದಿಂದ ಅನೇಕ ಆಮಿಷಗಳಿಗೆ ಮೊರೆ ಹೋಗಿ ಸ್ತ್ರೀಯರು ತಮ್ಮ ಶೀಲದ ಪ್ರಜ್ಞೆಯನ್ನು ಮರೆತು ಸೂಳೆಯರಾಗಿರುವುದು. ಇಷ್ಟೆಲ್ಲದ್ದಕ್ಕೂ ಕಾರಣ ಪುರುಷನೆನ್ನಬಹುದು. ಯಾಕೆಂದರೆ ಸ್ತ್ರೀಯು ಯಾವುದೇ ಆಸೆ-ಆಕಾಂಕ್ಷೆಗಳಿಗೆ ಒಳಗಾಗದೆ ಇದ್ದರೂ ಇಂದಿನ ಪುರುಷ ಸಮಾಜ ಅದರ ಮೇಲೆ ಕೊಲೆ ಬೆದರಿಕೆಯನ್ನು, ಕುಟುಂಬದ ಬೆದರಿಕೆಯನ್ನು ಹಾಕುವುದರ ಮೂಲಕ ಅವರನ್ನು ಮನ ಒಲಿಸಿಕೊಳ್ಳುವಂತದ್ದು. ಅದೇ ರೀತಿ ಈ ಸಮಾಜದ ಒಡೆತನವೂ ಕೊಡ ಸ್ತ್ರೀಯರನ್ನು ಹಾಳುಮಾಡುವುದಲ್ಲದೆ, ಪುರೋಹಿತ ವರ್ಗದವರು ಸಹ ಶೋಷಣೆಯನ್ನು ಮಾಡುವುದು ಇಂದಿನ ದಿನ ಪತ್ರಿಕೆಗಳಲ್ಲಿ, ವಾರ್ತೆಗಳಲ್ಲೂ ನೋಡಬಹುದಾಗಿದೆ. ಆದಷ್ಟು ಕೆಳವರ್ಗದ ಸ್ತ್ರೀಯರ ಮೇಲೆ ಹೆಚ್ಚಿನದಾಗಿ ಮುಗಿ ಬೀಳುತ್ತಾರೆ.

ಸ್ತ್ರಿಯರು ತಮ್ಮ ಸಂತಾನದ ಅಪೇಕ್ಷೆಗೋಸ್ಕರ ದೇವರ ಮೊರೆ ಹೋಗುವಂತಹದ್ದು, ಆದರೆ ಆ ದೇವರ ಹೆಸರಿನಲ್ಲಿ ಬದುಕುವಂತಹ ಪುರೋಹಿತರು

ಹೆಣ್ಣಿಗೆ ಇಲ್ಲದ ಆಸೆ ಆಕಾಂಕ್ಷೆಗಳನ್ನು ಹೇಳಿ ಸ್ತ್ರೀಯರನ್ನು ಹಾಳುಮಾಡುವಂತದ್ದು, ತನ್ನ ಗಂಡಂದಿರ ವಿವಾಹ ವಿಚ್ಛೇದನವನ್ನು ಕೊಡಿಸುವಂತದ್ದು ಇಂತಹ ಕೃತ್ಯಗಳನ್ನು ಪುರೋಹಿತ ವರ್ಗದವರು, ನಮ್ಮನ್ನು ಹೆತ್ತವರು ಹೆಣ್ಣು ಎಂಬುದನ್ನು ಮರೆತು ಇಂತಹ ಹೇಯ ಕೃತ್ಯಗಳನ್ನು ಮಾಡುತ್ತಾರೆ.

ವೇದ ಶಾಸ್ತ, ಪುರಾಣ, ರಾಮಾಯಣ, ಮಹಾಭಾರತಗಳನ್ನು ಪುರುಷರೇ ಬರೆದ ಸಲುವಾಗಿ ತಾವು ಪತಿವ್ರತೆಯರಾಗಿರಬೇಕೆಂದು ಹೇಳದೆ ತಮ್ಮ ಸ್ವಾರ್ಥ ಸುಖಕ್ಕಾಗಿ, ಭೋಗಕ್ಕಾಗಿ ಸ್ತ್ರೀಯನ್ನು ದಾಸಿಯನ್ನಾಗಿಡಲು ಪತಿವ್ರತಾ ಧರ್ಮ ಹೇರಿದ್ದು ತುಂಬಾ ಕುಟಿಲತನದಿಂದ ಕೂಡಿದೆ. ಆಕೆ ತನ್ನ ಪಾತಿವ್ರತ್ಯವನ್ನು ಕಾಪಾಡಿಕೊಳ್ಳಲು ಪಡಬಾರದ ಕಷ್ಟಗಳನ್ನು ಪಡುವುದು, ಕಣ್ಣೀರು ತರಿಸುವುದು ಹಿಂದೂ ಧರ್ಮದ ಗುತ್ತಿಗೆಗಳಾಗಿ ಮಾಡಿ ತಾನು ಗೂಳಿಯಂತೆ ಊರಿನೆಲ್ಲಾ ಹೊಲಗಳನ್ನು ಮೆಯುತ್ತಾ ಹಾಳುಗೆಡವುತ್ತಾ ಬರುವುದು ತನ್ನ ಹಕ್ಕೆಂದು ಗಂಡ ಸತ್ತರೆ ಹೆಣ್ಣು ಸತಿ ಹೋಗಬೇಕೆಂದು ಹೆಂಡತಿ ಸತ್ತರೆ ತಾನು ಕೂಡಲೇ ಹತ್ತು ಲಗ್ನವಾಗಬಹುದೆಂದು ಶಾಸ್ತ ರಚಿಸಿದ್ದು ಅಪರಾಧದ ಪರಮಾವಧಿ ತೋರಿಸುವುದು ಇದಕ್ಕೆ ಉದಾಹರಣೆಗಳನ್ನು ನೋಡಬಹುದಾಗಿದೆ.

ಸುದರ್ಶನ ಮತ್ತು ಅವನ ಪತ್ನಿ ಓಘವತಿ ಎಂಬ ಋಷಿ ದಂಪತಿಗಳ ಕಥೆ ಇದೆ. ಈ ಕಥೆಯನ್ನು ಭೀಷ್ಮನು ಧರ್ಮರಾಯನಿಗೆ ಹೇಳುತ್ತಾನೆ. ಸುದರ್ಶನ ಅತಿಥಿ ಸತ್ಕಾರಕ್ಕಿಂತ ಮಿಗಿಲಾದ ವ್ರತ ಯಾವುದು ಇಲ್ಲವೆಂದು ಭಾವಿಸಿದ್ದ. ಓಘವತಿ ಅವನ ಮನೋ ವ್ರತವನ್ನು ಕಟ್ಟು ನಿಟ್ಟಾಗಿ ಪಾಲಿಸುತ್ತಿದ್ದಳು. ಒಮ್ಮೆ ಸುದರ್ಶನ ತನ್ನ ಪತ್ನಿಗೆ ಹೇಳಿದ: 'ಗೃಹಸ್ಥಾಶ್ರಮಕ್ಕನುಸಾರವಾಗಿ ನಡೆಯಬೇಕೆಂದು ನನ್ನ ಸಂಕಲ್ಪ ಆದ್ದರಿಂದ ನೀನು ಅತಿಥಿಗೆ ಅನುಕೂಲಳಾಗಿ ನಡೆದುಕೋ, ನಿನ್ನ ಶರೀರವನ್ನು ಅತಿಥಿಗೆ ನೀಡಬೇಕಾದ ಅಗತ್ಯ ಬಂದರೂ ಹಿಂದು ಮುಂದು ನೋಡದೆ ಅವನ ಇಚ್ಛೆಯನ್ನು ನೆರವೇರಿಸು' ಈ ಆಜ್ಞೆಯನ್ನು ಪತ್ನಿಯು ಪಾಲಿಸಿದಳು.

ಒಂದು ಸಂಧರ್ಭದಲ್ಲಿ ಪತಿಯಿಲ್ಲದ ಸಮಯದಲ್ಲಿ ಆಶ್ರಮಕ್ಕೆ ಒಬ್ಬ ಅತಿಥಿ ಆಗಮನವಾಯಿತು. ತನ್ನ ಪತಿಯ ಆಜ್ಞೆಯ ಮೇರೆಗೆ ಆತನನ್ನು ಬರಮಾಡಿಕೊಂಡು, ಆತಿಥ್ಯವನ್ನು ನೆರವೇರಿಸಿದಳು. ಅತಿಥಿಗೆ ಅಸಮಧಾನ ಪಡಿಸಬಾರದೆಂಬ ಪತಿಯ ಆದೇಶದ ಪ್ರಕಾರ ಅವನ ಕೋರಿಕೆಯನ್ನು ಈಡೇರಿಸಿದಳು. ಆಶ್ರಮಕ್ಕೆ ಹಿಂತಿರುಗಿದ ಸುದರ್ಶನ ಋಷಿಗೆ ತುಂಬಾ ಸಂತೋಷವಾಯಿತು. ಈ ಸತಿ ಪತಿಯರಿಗೆ ಇಂದ್ರ ಲೋಕ ಪ್ರಾಪ್ತವಾಯಿತು ಎಂದು ಭೀಷ್ಮನು ಕಥೆಯನ್ನು ಮುಗಿಸಿದನು.

➢ ಕಾಯಕ ಮಾಡಿದವಳು ಓಘವತಿ ಕೈಲಾಸ ಪಡೆದವನು ಗಂಡ ಸುದರ್ಶನ.

- ಇಂದ್ರಲೋಕ ಪ್ರಾಪ್ತವಾಗಲು ಬಂದ ಬಂದವರಿಗೆ ಮಲಗುವ ಬಸವಿಯಾಗಬೇಕೆಂದು ಹೇಳುವ ಈ ಕಥೆ ಹುಟ್ಟಿಸಿದರು ಪುರೋಹಿತರು ಭೀಷ್ಮನ ಮೂಲಕ ಹೇಳಿದ್ದು ತುಂಬಾ ಕುಚೋದ್ಯತನದಿಂದ ಕೂಡಿದೆ.
- ಸುಳ್ಳಿಗೆ ಸೂಡುಕಟ್ಟಿ ಆಕಾಶಕ್ಕೆ ಉರಿ ಹಚ್ಚುವ ಕೆಲಸ ಪುರೋಹಿತರು ಇಂಥ ಕಥೆಗಳಿಂದ ಮಾಡಿದ್ದಾರೆ.

ಸ್ತ್ರೀ–ಪುರುಷರ ಸಂಬಂಧವನ್ನು ಕುರಿತ ಮತ್ತೊಂದು ಮಾದರಿಯನ್ನು ಮಹಾಭಾರತದ ವನಪರ್ವತದಲ್ಲಿ ಕಾಣಬಹುದಾಗಿದೆ. ಜಮದಗ್ನಿ ಅವನ ಹೆಂಡತಿ ರೇಣುಕೆ ಹಾಗೂ ಮಗ ಪರಶುರಾಮ ಇವರ ಕಥೆಯಲ್ಲಿ ಕಾಣುತ್ತೇವೆ. ಜಮದಗ್ನಿಯ ಮಡದಿ ರೇಣುಕೆ ಗಂಗಾ ನದಿಗೆ ನೀರು ತರಲು ಹೋಗಿದ್ದಾಗ ಅಲ್ಲಿ ಚಿತ್ರರಥನೆಂಬ ಗಂಧರ್ವನು ತನ್ನ ಸತಿಯರೊಡನೆ ಜಲಕ್ರೀಡೆಯಾಡುವುದನ್ನು ನೋಡಿದ ರೇಣುಕೆ ಅಲ್ಲೆ ನಿಲ್ಲುತ್ತಾಳೆ. ಇದರಿಂದ ಪತಿಯ ಹೋಮಕಾಲ ಮಿಂಚಿ ಹೋಗುತ್ತದೆ. ಪುರುಷನಲ್ಲಿ ಆಸಕ್ತಳಾದ ಪಾತಿವ್ರತ್ಯ ಭಂಗವಾಯಿತೆಂದು ಕ್ಷುದ್ರನಾದ ಜಮದಗ್ನಿ ಇವಳ ಶಿರಚ್ಛೇದ ಮಾಡೆಂದು ತನ್ನ ಐದು ಜನ ಮಕ್ಕಳಿಗೆ ಹೇಳುತ್ತಾನೆ. ಆದರೆ ನಾಲ್ವರು ಮಾತೃದೇವತೆಯನ್ನು ಕೊಲ್ಲುವುದು ಮಹಾಪಾಪವೆಂದು ತಿಳಿದು ತಂದೆಯ ಆಜ್ಞೆಯನ್ನು ಮೀರುತ್ತಾರೆ. ಇದರಿಂದ ಮತ್ತಷ್ಟು ಕೋಪಗೊಂಡ ಜಮದಗ್ನಿ ತನ್ನ ಐದನೇ ಮಗನಾದ ಪರಶುರಾಮನಿಗೆ ಹೇಳಿದಾಗ ಪರಶುರಾಮ ತನ್ನ ಪಿತೃಪಾಲನೆಯಂತೆ ನಾಲ್ವರು ಅಣ್ಣಂದಿರನ್ನು ಮತ್ತು ತಾಯಿಯನ್ನು ಕೊಲ್ಲುತ್ತಾನೆ. ಇದರಿಂದ ಮತ್ತಷ್ಟು ಕೋಪಗೊಂಡ ಜಮದಗ್ನಿ ತನ್ನ ಐದನೇ ಮಗನಾದ ಪರಶುರಾಮನಿಗೆ ಹೇಳಿದಾಗ ಪರಶುರಾಮ ತನ್ನ ಪಿತೃಪಾಲನೆಯಂತೆ ನಾಲ್ವರು ಅಣ್ಣಂದಿರನ್ನು ಮತ್ತು ತಾಯಿಯನ್ನು ಕೊಲ್ಲುತ್ತಾನೆ. ಇದರಿಂದ ಸಂತೃಪ್ತನಾದ ಜಮದಗ್ನಿ ನಿನಗೆ ವರ ನೀಡುವೆನು ಕೇಳು ಎಂದಾಗ ಪರಶುರಾಮ ಅವರನ್ನೆಲ್ಲಾ ಮತ್ತೆ ವರ ಪಡೆದು ಬದುಕಿಸಿಕೊಳ್ಳುತ್ತಾನೆ.

ಇಂತಹ ಕಥೆಗಳಿಗೆ ತಳ ಬುಡವಿಲ್ಲದೆ ಅಂದಿನ ಸಮಾಜ ಮತ್ತು ಜನ ಸ್ತ್ರೀಯ ಬಗ್ಗೆ ಎಂಥ ಹೇಯದಿಂದ ನಡೆದು ಕೊಂಡರೆಂಬುದು ಈ ಕಥೆ ತಿಳಿಸುವುದು.

ರಾಮ ಲಕ್ಷ್ಮಣರಿಲ್ಲದ ವೇಳೆಯಲ್ಲಿ ರಾವಣನು ಸನ್ಯಾಸಿ ವೇಷದಲ್ಲಿ ಬಂದು ಸೀತೆಯನ್ನು ಅಪಹರಿಸಿಕೊಂಡು ಹೋಗುತ್ತಾನೆ. ಅತಿಥಿಗೆ ದೇಹಾರ್ಪಣೆ ಮಾಡಲು ಸೀತೆಗೆ ಸ್ವಲ್ಪವೂ ಇಷ್ಟವಿರಲಿಲ್ಲವೆಂಬುದು ಅವಳ ವಿರೋಧದಿಂದಲೇ ಸ್ಪಷ್ಟವಾಗುತ್ತದೆ. ಪರಪುರುಷನ ಅಧೀನದಲ್ಲಿದ್ದ ಸೀತೆಯನ್ನು ಸ್ವೀಕರಿಸಲು ಸಹ ರಾಮನು ಹಿಂಜರಿಯುತ್ತಾನೆ.

ರಾವಣನ ಹತ್ಯೆಯ ನಂತರ ಸೀತೆಯನ್ನು ರಾಮನೆಡೆಗೆ ಕರೆ ತಂದಾಗ ರಾಮ ಅವಳನ್ನು ನೇರವಾಗಿ ಸ್ವೀಕರಿಸದೆ ಹೀಗೆ ಹೇಳುತ್ತಾನೆ. ನಾನು ಯುದ್ಧ ಮಾಡಿದ್ದು ಮತ್ತು ಗೆದ್ದಿದ್ದು ನಿನ್ನ ಸಲುವಾಗಿ ಅಲ್ಲ. ಬಾರ್ಯಾಪಹಾರಿಯನ್ನು ಶಿಕ್ಷಿಸಲಾರದವನು ಎಂಬ ಅಪವಾದವನ್ನು ಕಳೆದು ಕೊಳ್ಳುವ ಸಲುವಾಗಿ ನಿನಗೆ ಇಷ್ಟವಿದ್ದೆಡೆಗೆ, ಲಕ್ಷ್ಮಣ, ಶತೃಘ್ನ ವಿಭೂಷಣ, ಭರತ, ಸುಗ್ರೀವ ಇವರಲ್ಲಿ ನಿನಗೆ ಇಷ್ಟವಾದವರಲ್ಲಿಗೆ ಹೋಗು. ನೇತ್ರರೋಗಿಗೆ ದೀಪ ಸಹ್ಯವಾಗುವುದಿಲ್ಲ, ಹಾಗೆ ನನಗೆ ಅರ್ಹಳಲ್ಲವೆಂದು ಹೇಳುತ್ತಾನೆ. ರಾಮನ ಕ್ರೂರ ಮಾತನ್ನು ಕೇಳಿ ಸೀತೆ ಅಗ್ನಿಗೆ ದೇಹಾರ್ಪಣೆ ಮಾಡಿಕೊಳ್ಳಲು ಅಗ್ನಿದೇವನಿಗೆ ಪ್ರಾರ್ಥಿಸಿ ಅಗ್ನಿಗೆ ಬಿದ್ದಾಗ ಅವಳು ಸುಡದೇ ಇರುವುದು ನೋಡಿ ರಾಮ ಸೀತೆಯನ್ನು ಸ್ವೀಕರಿಸಿದ್ದು.

ಅದೇ ರೀತಿ ಈ ಸೀತೆ ರಾಮನಿಂದ ದೂರವಾದಾಗ ಗಂಡ ರಾಮನನ್ನು ಏಕೆ ಶಂಕಿಸಲಿಲ್ಲ ಅವನನ್ನು ಏಕೆ ಚಿತೆಗೆ ಹಾಯಿಸಲಿಲ್ಲ ಎಂಬ ಪ್ರಶ್ನೆ ಉದ್ಭವವಾಗುತ್ತದೆ. ಇಷ್ಟೆಲ್ಲಾ ಹೇಳಿ ಮತ್ತೆ ಭೀಷ್ಮನಿಂದ ತತ್ವೋಪದೇಶ ಮಾಡಲು ಸಾಮಾನ್ಯ ಜನರ ಕಣ್ಣಲ್ಲಿ ಮಣ್ಣೆರಚಲು ಶಾಂತಿ ಪರ್ವದಲ್ಲಿ ಸ್ತ್ರೀ ಪುರುಷ ಸಂಬಂಧಗಳು ಕೃತ, ತೇತ್ರಾ, ದ್ವಾಪರ ಹಾಗೂ ಕಲಿಯುಗಗಳಲ್ಲಿ ಹೇಗೆ ವಿಕಾಸವಾಗುತ್ತಾ ಬಂದವು ಎಂಬುದು ಸಾಮಾಜಿಕ ಚಿಂತಕರಂತೆ ಹೇಳಿಸಿದ್ದು ಇಂದಿನ ಕೂಸಿಗೂ ಅರ್ಥವಾಗುವುದು.

- ಕೃತಯುಗದಲ್ಲಿ : ತಾಯಿ, ಮಗ, ತಂದೆ, ಮಗಳು, ಅಣ್ಣ, ತಂಗಿ ಸಂಬಂಧಗಳಿಗೆ ನಿಷೇಧವಿರಲಿಲ್ಲ.
- ತೇತ್ರಾಯುಗದಲ್ಲಿ: ಅನ್ಯೋನ್ಯ ಸ್ಪರ್ಶದಿಂದ ಸಮಾಗಮ ಏರ್ಪಡುವಂತದ್ದು.
- ದ್ವಾಪರಯುಗದಲ್ಲಿ: ಮಿಥುನಾವಸ್ಥೆ ಅಂದರೆ ಗಂಡು-ಹೆಣ್ಣು ಜೋಡಿ ಕೆಲಕಾಲ ಜೊತೆಗೂಡಿರುವ ಸಂಪ್ರದಾಯ ರೂಢಿ.
- ಕಲಿಯುಗದಲ್ಲಿ ; ಸ್ತ್ರಿ-ಪುರುಷರ ಜೋಡಿ ಸ್ಥಿರಗೊಂಡಿತು.

ಭೀಷ್ಮನ ಮೂಲಕ ಪುರೋಹಿತ ವರ್ಗ ತಮ್ಮ ತೆವಲು ತೀಟೆ ಸ್ವಾರ್ಥ ಸುಖ ಭೋಗ ಲಾಲಸೆಗಳನ್ನು ತೀರಿಸಿ ಕೊಂಡದ್ದು ಹೆಣ್ಣನ್ನು ಸದಾ ದಾಸಿಯಾಗಿರುವಂತೆ ಮಾಡಿದ್ದು ಇಲ್ಲಿ ತಿಳಿಯುವುದು.

ಹಿಂದೂ ಧರ್ಮದ ಪ್ರಕಾರ ಸ್ತ್ರೀ ಎಂದರೆ ಕೇವಲ "ಮಕ್ಕಳನ್ನು ಹಡೆಯುವ ಯಂತ್ರ" ಎಂಬಂತೆ ಅರ್ಥೈಸಿರುವುದು ತಿಳಿದು ಬರುತ್ತದೆ. ಪ್ರಾಚೀನ ಮಹಾಗ್ರಂಥಗಳಾದ

ರಾಮಾಯಣ ಮತ್ತು ಮಹಾಭಾರತವನ್ನು ನಾವು ಅವಲೋಕಿಸಿದಾಗ ಕೇವಲ ಪುರುಷರಿಗೆ ಮಾತ್ರ ಹೆಚ್ಚಿನ ಪ್ರಾಮುಖ್ಯತೆ ನೀಡಿ, ಮಹಿಳೆಯರನ್ನು ಕೇವಲ ಗೃಹೋಪಯೋಗಿ ವಸ್ತು ಎಂಬಂತೆ ಬಿಂಬಿಸಲಾಗಿದೆ. ಆದಿಕಾಲದಿಂದಲೂ ಅಂದರೆ ವೇದಗಳ ಕಾಲದಿಂದಲೂ ಸಹ ಸ್ತ್ರೀಗೆ ಅಷ್ಟೇನೂ ಮಹತ್ವ ನೀಡಿಲ್ಲ. ಭಾರತ ದೇಶದಲ್ಲಿ ಮಾತೃ ಪ್ರಧಾನ ಕುಟುಂಬಗಳಾಗಿದ್ದರೂ ಕೂಡ ಸ್ತ್ರೀಯು ಕೇವಲ ಭೋಗದ ವಸ್ತುವಾಗಿ, ಮಕ್ಕಳನ್ನು ಪಡೆಯುವ ಯಂತ್ರವಾಗಿ ಮತ್ತು ಗೃಹಿಣಿಯಾಗಿ ಬಾಳಬೇಕಾಗಿತ್ತು.

ಹಿಂದೂ ಧರ್ಮದ ಮಹಾನ್ ಗ್ರಂಥಗಳಾದ ರಾಮಾಯಣ ಮತ್ತು ಮಹಾಭಾರತದಲ್ಲಿಯೂ ಕೂಡ ಹೆಚ್ಚಿನದಾಗಿ ಪುರುಷ ಪರ ಮೌಲ್ಯಗಳನ್ನು ನಾವು ಕಾಣಬಹುದಾಗಿದೆ. ಅಲ್ಲಿ ಸ್ತ್ರೀಗೆ ಮುಕ್ತ ಅವಕಾಶಗಳಿರಲಿಲ್ಲ. ಯಾಕೆಂದರೆ ಮೊದ ಮೊದಲು ಪುರೋಹಿತರು ತಮ್ಮ ಸಾಹಿತ್ಯವನ್ನು ಮನೋರಂಜನೆಗಾಗಿ, ಇನಾಮಿಗಾಗಿ, ಅಂದರೆ ರಾಜರನ್ನು ತಮ್ಮ ಆಸ್ಥಾನದಲ್ಲಿ ಸಂತೋಷ ಪಡಿಸಿ ಹಣ ಪಡೆಯುವುದಕ್ಕಾಗಿ ಕೇವಲ ಪುರುಷ ಪರ ಮೌಲ್ಯಗಳನ್ನು ಗಮನದಲ್ಲಿಟ್ಟುಕೊಂಡು ಸಾಹಿತ್ಯ ರಚನೆ ಮಾಡಿದ್ದಾರೆ.

ಮಹಾಭಾರತದಲ್ಲಿ ದ್ರೌಪದಿ ಐದು ಜನರಿಗೆ ಹೆಂಡತಿಯಾಗಿರುವುದು ಕಂಡು ಬರುತ್ತದೆ. ಅಂದ ಮೇಲೆ ಆಕೆಯ ಮೇಲಿನ ವ್ಯಾಮೋಹ, ಒಂದು ಹಣ್ಣನ್ನು ಎಲ್ಲರೂ ಸಮನಾಗಿ ಹಂಚಿ ತಿನ್ನುವಂತಹ ಸಂಪ್ರದಾಯ ಕೂಡ ಇಲ್ಲಿ ಕೆಲಸ ಮಾಡಿದೆ. ದ್ರೌಪದಿ ಪಾಂಡವರ ಹೆಂಡತಿಯಾಗಿ ಅಲ್ಲದೆ ಪಗಡೆಯಾಟದಲ್ಲಿ ಧರ್ಮರಾಯ ಅವಳನ್ನು ಜೂಜಾಟಕ್ಕೆ ಇಟ್ಟಿರುವುದು ಒಂದು ನಿಟ್ಟಿನಲ್ಲಿ ವಸ್ತು ಎಂಬಂತೆ ಬಿಂಬಿಸಲಾಗಿದೆ. ಆಕೆಯನ್ನು ಗೆದ್ದ ಕೌರವರು ಅವರಿಗೆ ಇಚ್ಛೆ ಬಂದ ರೀತಿಯಲ್ಲಿ ನಡೆದುಕೊಳ್ಳುವುದು, ದ್ರೌಪದಿಯ ಸಭಾಂಗಣದಲ್ಲಿ ವಸ್ತ್ರಾಪಹರಣ ಮಾಡುವಂತದ್ದು ಹೀಗೆ ಸ್ತ್ರೀಗೆ ಯಾವುದೇ ರೀತಿಯ ಬೆಲೆ ಕೊಡದೇ ತುಚ್ಛೀಕರಿಸಲಾಗಿದೆ. ಸ್ತ್ರೀಯ ಮುಖ್ಯ ಆಸ್ತಿಯೇ ಶೀಲ. ಅಂತಹುದನ್ನು ಇಲ್ಲಿ ಕೀಚಕನು ಅವಳನ್ನು ಅವನಿಗೆ ಮನಬಂದಂತೆ ಮಾಡುವುದು. ಇಲ್ಲಿ ಕೌರವರಿಗೆ ಮೌಲ್ಯಮಾನ್ಯವಾಗಿದೆ. ಪಾಂಡವರು ನಿಶ್ಯಕ್ತರನ್ನಾಗಿ ಮಾಡಿರುವುದು ಕಂಡು ಬರುತ್ತದೆ.

ಶ್ರೀ ಕೃಷ್ಣನು ತನ್ನ ತಂಗಿಯಾದ ಸುಭದ್ರೆಯನ್ನು ಅರ್ಜುನನಿಗೆ ವಿವಾಹ ಮಾಡಿ ಕೊಡುವಂತಹ ಸಂದರ್ಭದಲ್ಲಿ ಅರ್ಜುನನಿಗೆ ವರದಕ್ಷಿಣೆಯಾಗಿ ಬಂಗಾರ ಮತ್ತು ಬಂಗಾರ ಕೂದಲು ಹೊಂದಿರುವ ಸ್ತ್ರೀ ಸೇವಕಿಯರನ್ನು ವರದಕ್ಷಿಣೆಯಾಗಿ ನೀಡುವುದು ಕಂಡು ಬರುತ್ತದೆ. ಅದೇ ರಿತಿ ಇನ್ನೊಂದು ಪರ್ವದಲ್ಲಿ ಗುರುವಿನ ಕಾಣಿಕೆಗಾಗಿ ರಾಜ ತನ್ನ ಮಗಳನ್ನು ಮೂರು ಲೋಕದ ಪುರುಷರು ಮೂರ್ಛೆ ಹೋಗುವಂತಹ ರೂಪವನ್ನು

ಹೊಂದಿರುವಂತಹ ತನ್ನ ಮಗಳನ್ನು ಬೇರೊಬ್ಬರಿಗೆ ಮಾರಿ 800 ಕುದುರೆಗಳನ್ನು ಕೊಡು ಎಂದು ಹೇಳಿ ಕೊಂಡಿರುವುದು ಇಲ್ಲಿ ನೆನೆಯಬಹುದು. ಅವಳನ್ನು ಒಬ್ಬ ರಾಜನಿಗೆ ಕೊಟ್ಟು 200 ಕುದುರೆಗಳನ್ನು ಪಡೆಯುವುದು. ಆ ರಾಜಕುಮಾರಿಯಿಂದ ಮಕ್ಕಳ ಸಂತಾನ ಪಡೆದು ಬೇರೊಬ್ಬರಿಗೆ ಬಿಟ್ಟು ಕೊಡುವುದು. ಮತ್ತೊಬ್ಬರಿಂದ 200 ಕುದುರೆಗಳನ್ನು ಪಡೆಯುವುದು. ಹಾಗೆಯೇ ಕಡಿಮೆ ಬಂದದಕ್ಕೆ 200 ಕುದುರೆ ಮತ್ತು ಆ ರಾಜ ಕುಮಾರಿಯನ್ನು ಆ ಗುರುವಿಗೆ ಗುರುಕಾಣಿಕೆಯಾಗಿ ನೀಡುವಂತದ್ದು. ಇಲ್ಲಿ ಸ್ತ್ರೀಯು ಕೇವಲ ವ್ಯಾಪಾರದ ವಸ್ತುವಾಗಿ ಪರಿಗಣಿತವಾಗಿದ್ದಾಳೆಯೇ ವಿನಃ ಯಾವುದೇ ರೀತಿಯ ಸ್ವಾತಂತ್ರ್ಯವಿಲ್ಲ.

ರಾಮಾಯಣದಲ್ಲಿಯೂ ಸಹ ಒಂದು ದೃಶ್ಯವನ್ನು ಕಾಣಬಹುದಾಗಿದೆ. ಅದು ಹೇಗೆಂದರೆ, ರಾಮ ಜಿಂಕೆಯನ್ನು ಅಟ್ಟಿಸಿಕೊಂಡು ಹೋದಂತಹ ಸಂದರ್ಭದಲ್ಲಿ ರಾವಣನು ಅವಳನ್ನು ಅಪಹರಿಸಿಕೊಂಡು ಹೋಗಿರುವಂತಹದ್ದು. ಹಾಗೆ ರಾಮ ರಾವಣನೊಡನೆ ವಾಲಿ–ಸುಗ್ರೀವರ ಸಹಕಾರ ಪಡೆದು ಅವನನ್ನು ಸೋಲಿಸಿ ಸೀತೆಯನ್ನು ಪಡೆಯುವಂತಹ ರೀತಿ, ಈ ರೀತಿಯಾಗಿ ಬಂದಂತಹ ಸೀತೆಯನ್ನು ರಾಮ ಶೀಲದ ಅನುಮಾನ (ಪಾತಿವ್ರತ್ಯದ ಬಗ್ಗೆ) ಶಂಕಿಸುವುದು. ನಾನು ನಿನಗೋಸ್ಕರ ಯುದ್ಧ ಮಾಡಲಿಲ್ಲ ನನ್ನ ಮರ್ಯಾದೆಗೋಸ್ಕರ ನನ್ನನ್ನು ಕೈಲಾಗದವನು ಎಂದು ಕರೆಯುವ ಕಳಂಕವನ್ನು ತಪ್ಪಿಸಿ ಕೊಳ್ಳುವ ಸಲುವಾಗಿ ನಾನು ಯುದ್ಧ ಮಾಡಿದೆ ಎಂದು ಹೇಳುವುದು. ಹಾಗೆಯೆ ರಾವಣನ ಕಪಿಮುಷ್ಟಿಯಿಂದ ಬಂದ ಸೀತೆಯನ್ನು ರಾಮ ಶೀಲದ ಅನುಮಾನದಿಂದ ತಿರಸ್ಕರಿಸುವುದು. ಇದರಿಂದ ನೊಂದ ಸೀತೆ ಅಗ್ನಿ ದೇವನನ್ನು ಪರಿತಪಿಸಿ ಅಗ್ನಿ ಪರೀಕ್ಷೆಗೆ ಒಳಗಾಗಿ ಜಯಿಸುವುದು, ಈ ರೀತಿ ಅವಳನ್ನು ಸಂಕಿಸಿದ್ದಾರೆಯೇ ವಿನಃ ರಾಮನನ್ನು ಇಲ್ಲಿ ಸೀತೆಯನ್ನು ಅಗಲಿ ಬಹಳ ದಿನವಾದರೂ ಅವನು ನಿಯತ್ತಾಗಿ ಇದ್ದಾನೆ ಎಂದು ಪ್ರಶ್ನೆ ಮಾಡಿಲ್ಲ. ಅವನಿಗಾಗಿ ಯಾಕೆ ಅಗ್ನಿ ಪರೀಕ್ಷೆಗೆ ಒಳಪಡಿಸಲಿಲ್ಲ ಎಂಬ ಪ್ರಶ್ನೆ ಉದ್ಭವವಾಗುತ್ತದೆ. ಈ ಹಿನ್ನೆಲೆಯಲ್ಲಿ ನೋಡಿದಾಗ ಪುರುಷ ಪರವಾಗಿಯೇ ಇಲ್ಲಿ ವ್ಯಕ್ತವಾಗಿದೆ.

ಅದೇ ರೀತಿಯಾಗಿ ಮನು ಸಹ ತನ್ನ ಮನುಸ್ಮೃತಿಯಲ್ಲಿಯೂ ಸಹ ಸ್ತ್ರೀಗೆ ಯಾವುದೇ ರೀತಿಯ ಸ್ಥಾನಮಾನಗಳನ್ನು ನೀಡಿಲ್ಲ. ಯಾಕೆಂದರೆ ಕೇವಲ ಪುರುಷ ಪರವಾಗಿಯೇ ಪುರುಷರ ಮೌಲ್ಯಗಳನ್ನು ವ್ಯಕ್ತ ಪಡಿಸಿದ್ದಾನೆ. ಇಲ್ಲಿ ಸ್ತ್ರೀಯು ಯಾವುದೇ ದೃಷ್ಟಿಯಿಂದ ಸ್ವತಂತ್ರ್ಯಳಲ್ಲ. ಗಂಡ ಸತ್ತರೆ ಹೆಂಡತಿ ಅಗ್ನಿ ಹಾರಿ ಪ್ರಾಣವನ್ನು ಬಿಡಬೇಕು. ಅದೇ ಹೆಂಡತಿ ಸತ್ತರೆ ಗಂಡ ಬೇರೆ ಹತ್ತು ಮದುವೆಗಳನ್ನು ಸಂಭ್ರಮದಿಂದ ಆಚರಿಸಬಹುದು. ಈ ತರಹದ ಮೌಲ್ಯಗಳನ್ನು ಈ ಮನು ತಮ್ಮ ಮನುಸ್ಮೃತಿಯಲ್ಲಿ ವ್ಯಕ್ತ ಪಡಿಸಿದ್ದಾರೆ. ಸ್ತ್ರೀಗೆ ಸಮಾನತೆ , ಆಸ್ತಿ, ಇತರೆ ಹಕ್ಕುಗಳು ಸಹ ಇರಲಿಲ್ಲ.

ಮನುವಿಗೆ ಸಮಾನತೆಯ ಭಾವನೆ ತಮ್ಮ ಮನಸ್ಸಿಗೆ ಬಂದಂತಿಲ್ಲ. ತಾನು ಒಬ್ಬ ಪುರುಷನಾಗಿರುವ್ವದರಿಂದ ಈ ರೀತಿಯಾಗಿ ರಚನೆ ಮಾಡಿದ್ದಾನೆ? ಅಥವಾ ಪರಿಸರಕ್ಕನುಗುಣವಾಗಿ ತಾನು ಈ ರೀತಿ ಬರೆಯ ಬೇಕಾಯಿತೆ ಎಂಬ ಪ್ರಶ್ನೆ ಚಿಂತೆಯನ್ನು ಮಾಡುವಂತದ್ದಾಗಿದೆ. ಈ ರೀತಿಯಾಗಿ ಹಿಂದೂ ಧರ್ಮ ಪುರುಷ ಪರ ಮೌಲ್ಯಗಳನ್ನು ಮಾತ್ರ ಎತ್ತಿಹಿಡಿದಿದೆಯೆ ವಿನಃ ಸ್ತ್ರೀಯರ ಕಾಳಜಿ ಬಗ್ಗೆ ಕೆಲವೊಂದು ಕಡೆ ಮಾತ್ರ ಅವಕಾಶ ಕಲ್ಪಿಸಿದೆ.

ಹಿಂದೂ ಧರ್ಮದಲ್ಲಿ ಯಾವುದೇ ಒಬ್ಬ ಸ್ತ್ರೀ ಸಾಹಿತ್ಯ ಸೃಷ್ಟಿಮಾಡಲಿಲ್ಲ. ಕೇವಲ ಪುರುಷ ಸಮಾಜ ಮಾತ್ರ ಸಾಹಿತ್ಯ ಸೃಷ್ಟಿಮಾಡಿತು. ರಾಮಯಣ, ಮಹಾಭಾರತ ಇಂತಹ ಮಹಾನ್ ಗ್ರಂಥಗಳನ್ನು ಬರೆದವರು ಸಹ ಪುರುಷರೇ ಹೊರತು ಸ್ತ್ರೀಯರು ಈ ರೀತಿಯ ಗ್ರಂಥಗಳನ್ನು ರಚನೆ ಮಾಡಲೇ ಇಲ್ಲ. ಈ ದೃಷ್ಟಿಯಿಂದ ನೋಡುವುದಾದರೂ ಸಹ ಸ್ತ್ರೀಯನ್ನು ಯಾವ ರೀತಿಯಾಗಿ ಬಳಸಿಕೊಡಿದ್ದಾರೆ, ಅವರ ಸ್ಥಾನ ಮಾನ ಸಹ ಎಂತದ್ದು ಎಂದು ತಿಳಿದು ಬರುತ್ತದೆ. ಸ್ತ್ರೀ ಕೇವಲ ಗೃಹಿಣಿ, ಭೋಗದ ವಸ್ತು, ಮಕ್ಕಳನ್ನು ಪಡೆಯುವ ಯಂತ್ರದೋಪಾದಿಯಲ್ಲಿ ಬಳಸಿಕೊಡಿದ್ದಾರೆಯೇ ವಿನಃ ಅವರು ವಿದ್ಯಾಭ್ಯಾಸವಾಗಲಿ ಆವರಿಗೆ ಅವಕಾಶವಿರಲಿಲ್ಲವೇನೋ ಅನಿಸುತ್ತದೆ. ಪುರುಷನಿಗೆ ಹೆಚ್ಚಿನ ಮಹತ್ವ ನೀಡಿದ್ದಾರೆಯೇ ವಿನಃ ಸ್ತ್ರೀಯರಿಗೆ ಮಹತ್ವ ನೀಡಿಲ್ಲ.

ವೇದ ಉಪನಿಷತ್ತುಗಳ ಕಾಲದಲ್ಲಿಯೂ ಸಹ ಪುರುಷನಿಗೆ ಹೆಚ್ಚಿನ ಮಹತ್ವ ನೀಡಿವೆ ಹೊರತು ಸ್ತ್ರೀಗೆ ಅಷ್ಟೊಂದು ಮಹತ್ವ ನೀಡಿಲ್ಲ. ಒಂದೊಂದು ಸನ್ನಿವೇಶದಲ್ಲಿ ಮಾತ್ರ ಸ್ತ್ರೀಗೆ ಮಹತ್ವ ನೀಡಿದ್ದಾರೆ. ಇಲ್ಲಿ ಲಿಂಗತಾರತಮ್ಯ ಮಾಡುವುದು ಮುಖ್ಯ ಉದ್ದೇಶವಿರಬಹುದು. ಪುರುಷನಷ್ಟೇ ಸ್ತ್ರೀಗೆ ಅವಕಾಶಗಳು ನೀಡಲೇ ಇಲ್ಲ. ಪುರುಷ ಎಲ್ಲಾ ಕಡೆ ನಿರ್ಭಯದಿಂದ ತಿರುಗಾಡಬಹುದು. ಆದರೆ ಸ್ತ್ರೀ ಮಾತ್ರ ಈ ರೀತಿಯಾಗಿ ತಿರುಗುವಂತಿಲ್ಲ. ಅವಳು ನಾಲ್ಕು ಗೋಡೆಗಳ ಮಧ್ಯೆ ಮಾತ್ರ ಇರಬೇಕಾಗಿತ್ತು.

ಒಟ್ಟಾರೆಯಾಗಿ ಹಿಂದೂ ಧರ್ಮದಲ್ಲಿ ಪುರುಷ ಪರ ಮೌಲ್ಯಗಳನ್ನು ಈ ಮೇಲಿನ ಅಂಶಗಳಲ್ಲಿ ಕಾಣಬಹುದು. ಲಿಂಗತಾರತಮ್ಯ ಇದರಿಂದ ನಮಗೆ ತಿಳಿದು ಬರುತ್ತದೆ. ಪುರುಷರೇ ಒಳ್ಳೊಳ್ಳೆ ಸಾಹಿತಿಗಳಾಗಿದ್ದಾರೆ. ಯಾಕೆ ಸ್ತ್ರೀಯು ಸಹ ಈ ರೀತಿ ಸಾಹಿತಿಗಳಾಗಲು ಸಾಧ್ಯವಿರಲಿಲ್ಲವೆ? ಆಗಬಹುದಿತ್ತು, ಆದರೆ ಈ ಪುರುಷರು ಅವರಿಗೆ ಅವಕಾಶ ಕೊಡಲಿಲ್ಲ. ಆಧುನಿಕ ಕಾಲದಲ್ಲಿರುವಂತಹ ಸ್ಥಾನಮಾನ ಅಂದು ಅವರಿಗೆ ಇರಲಿಲ್ಲ ಆದುದರಿಂದ ಸ್ತ್ರೀಯರು ಅಂದು ಹಿಂದುಳಿಯಲು ಕಾರಣವಾಯಿತು.

ಪುರುಷ ಪ್ರಧಾನ ಸಮಾಜದಲ್ಲಿ ಹೆಣ್ಣು ಒಂದು ಮಾರಾಟದ ವಸ್ತುವಾಗಿದ್ದಂತೆ, ಭೋಗದ ವಸ್ತುವು ಆಗಿದ್ದಾಳೆ ಎಂಬುದ್ದಕ್ಕೆ ನಮ್ಮ ಸಮಾಜದಲ್ಲಿ ಇನ್ನು ಜೀವಂತವಾಗಿ

ಉಳಿದಿರುವ ದೇವದಾಸಿ ಪದ್ಧತಿಯೇ ಆಗಿದೆ. ಶತಮಾನಗಳಿಂದಲೂ ಕೆಳವರ್ಗದ ಹೆಣ್ಣುಮಕ್ಕಳನ್ನು ದೇವರ ಸೇವೆಗಾಗಿ ಮೀಸಲಿಟ್ಟು ಅವರನ್ನು ಬಸವಿಯರನ್ನಾಗಿ, ಸೂಳೆಯರನ್ನಾಗಿ ಮಾಡಿರುವುದನ್ನು ಕಾಣಬಹುದು. ದೇವದಾಸಿಯರೆಂದರೆ ದೇವಾಲಯದಲ್ಲಿ ದೇವರಿಗೆ ಸಂಗೀತ, ನರ್ತನವನ್ನು ಕಲಿತು ಆ ಸೇವೆಯನ್ನು ದೇವರಿಗೆ ಅರ್ಪಿಸುವವರನ್ನು ದೇವದಾಸಿಯರೆನ್ನಲಾಗುವುದು. ಪ್ರಾಚೀನ ಕಾಲದಲ್ಲಿ ರಂಗಭೋಗ ಮತ್ತು ಅಂಗಭೋಗದ ದೇವದಾಸಿಯರೆಂದು ಎರಡು ರೀತಿಯಲ್ಲಿ ದೇವರಿಗೆ ಸೇವೆ ನಡೆಯುತ್ತಿತ್ತು, ದೇವಸ್ಥಾನದ ಗರ್ಭಗುಡಿಯ ಮುಂಭಾಗದಲ್ಲಿ ( ನವರಂಗ ಅಥವಾ ರಂಗಮಂಟಪದಲ್ಲಿ ) ಸಲ್ಲಿಸುವ ಸೇವೆಗಳಿಗೆ ರಂಗಭೋಗ ಎಂದು ಕರೆಯಲಾಗುತ್ತಿತ್ತು. ದೇವರ ಸೇವೆಗಾಗಿ ತಮ್ಮನ್ನು ತಾವು ಅರ್ಪಿಸಿಕೊಂಡ ನಂತರ ತನ್ನ ಇಚ್ಚೆಗೆ ಬಂದ ಪುರುಷರೊಂದಿಗೆ ಲೈಂಗಿಕ ಸಂಬಂಧವನ್ನು ಹೊಂದಬಹುದಾಗಿತ್ತು. ದೇವದಾಸಿಯರಾಗಲು ಮುಖ್ಯ ಕಾರಣವೆಂದರೆ ಮನೆಯಲ್ಲಿ ಯಾರಾದರೂ ಖಾಯಿಲೆ ಬಿದ್ದರೆ, ಕಷ್ಟಕ್ಕೆ ಸಿಕ್ಕಿ ಹಾಕಿಕೊಂಡರೆ ಅಂತಹ ಸಮಸ್ಯೆಯಿಂದ ಪಾರಾಗಬೇಕೆಂಬ ಉದ್ದೇಶದಿಂದ ದೇವರಲ್ಲಿ ಇಂತಹ ಸಮಸ್ಯೆಯಿಂದ ನಮ್ಮನ್ನು ಪಾರು ಮಾಡಿದರೆ ನಮ್ಮ ಮನೆಯ ಹುಡುಗಿಯನ್ನು ದೇವರ ಸೇವೆಗೆಂದು ಮೀಸಲಾಗಿಡುತ್ತೇವೆಂದು ಹರಕೆ ಹೊತ್ತು ಕೊಳ್ಳುತ್ತಾರೆ. ಅದರಂತೆ ಆ ಹೆಣ್ಣು ಮಗು ಮೈ ನೆರೆದ ಬಳಿಕ ಅವಳ ಕೈಯಿಂದಲೇ ದೇವರಿಗೆ ಮಾಲೆ ಹಾಕಿಸಲಾಗುತ್ತದೆ. ಅಂತಹ ಹೆಣ್ಣು ಮಗಳು ಅಂದಿನಿಂದ ದೇವರಿಗೆ ಸಂಬಂಧ ಪಟ್ಟವಳೆಂದೇ ಅರ್ಥ. ನಂತರ ಅವಳು ದೇವರ ಸೇವೆಯನ್ನು ಮಾಡಿಕೊಂಡಿರುತ್ತಾಳೆ. ಅದರ ಹೆಸರಿನಲ್ಲೇ ಪುರೋಹಿತರ, ಶ್ರೀಮಂತ ವರ್ಗದವರ ಬಯಕೆಯನ್ನು ಹಿಂಗಿಸುವ ಸಾಧನವೂ ಕೂಡ ಆಗಿರುತ್ತಾಳೆ.

ದೇವದಾಸಿಯಾದವಳು ದೇವರ ಸೇವೆಯನ್ನು ಮಾಡಲು ಅಸಮರ್ಥಳು, ಅಶಕ್ತಳು, ಖಾಯಿಲೆ ಬಿದ್ದವಳೋ, ಅಥವಾ ಯೌವ್ವನಾವಸ್ಥೆಯನ್ನು ದಾಟಿದಳೆಂದರೆ, ದೇವಸ್ಥಾನದ ಕೆಲಸ ಕಾರ್ಯಗಳನ್ನು ಮಾಡಲು ಅಶಕ್ತಳಾದಳೆಂದರೆ ಆಗ ಆ ದೇವದಾಸಿಯು ದೇವಸ್ಥಾನಕ್ಕೆ ಬಂದು ಮಣೆಯ ಮೇಲೆ ಕೂತು ತಾನು ತೊಟ್ಟಿಕೊಂಡಿರುವ ಆಭರಣಗಳನ್ನೆಲ್ಲಾ ಕಳಚಿ ಅದರೊಂದಿಗೆ ಹನ್ನೆರಡು ನಾಣ್ಯಗಳನ್ನು ದೇವರಿಗೆ ಒಪ್ಪಿಸಿ ಹಿಂದಕ್ಕೆ ತಿರುಗಿ ನೋಡದೆ ಹೋಗುತ್ತಾಳೆ. ಅಂದಿನಿಂದ ಆಕೆಗೆ 'ನಿವೃತ್ತ ದೇವದಾಸಿ' ಎಂದು ಕರೆಯಲಾಗುತ್ತದೆ. ಒಂದು ಪಕ್ಷ ಆಕೆ ತೀರಿಕೊಂಡರೆ ದೇವರ ವಿಗ್ರಹದ ಮೇಲೆ ತೊಡಿಸಿದ ಬಟ್ಟೆಯನ್ನು ತೆಗೆದು ಆಕೆಯ ಶವಕ್ಕೆ ಹೊದಿಸಿ ದೇವಾಲಯದ ಬೆಂಕಿಯ ಮುಖಾಂತರ ಆಕೆಯ ಶವಕ್ಕೆ ಹಚ್ಚಿ ಶವಸಂಸ್ಕಾರ ಮಾಡಿದ ನಂತರ ಆಕೆ ಸಲ್ಲಿಸುತ್ತಿದ್ದ ದೇವಾಲಯದಲ್ಲಿ ಶೋಕಾಚರಣೆಯನ್ನು ನೆರವೇರಿಸುತ್ತಿದ್ದರು. ಆಕೆಯ ಶವಸಂಸ್ಕಾರಕ್ಕೆ ತಗುಲಿದ ವೆಚ್ಚವನ್ನು ದೇವಾಲಯದವರೇ ಕೊಡುತ್ತಿದ್ದರು. ದೇವದಾಸಿಯರಿಗೆ

ಪುರೋಹಿತರ ನಂತರದ ಸ್ಥಾನಮಾನ ಅವರಿಗೆ ಇರುತ್ತಿದ್ದು, ಊರಿನ ಯಾವುದೇ ಮದುವೆ ಶುಭಸಮಾರಂಭಗಳಿಗೂ ಕೂಡ ಆಕೆಗೆ ವಿಶೇಷವಾಗಿ ಸ್ವಾಗತ ಪಿರುತ್ತಿತ್ತು. ಆಸ್ತಿಯಲ್ಲೂ ಕೂಡ ಆಕೆಗೆ ಸಮನಾದ ಪಾಲು ಹಾಗೂ ದತ್ತು ಸ್ವೀಕಾರದ ಹಕ್ಕನ್ನು ಕೂಡ ಅವರು ಹೊಂದಿದ್ದರು.

ದೇವದಾಸಿ ಪದ್ಧತಿ ಒಂದು ಕಾಲದಲ್ಲಿ ಹುಟ್ಟಿ ಇಂದು ಕೀಳಲಾರದಷ್ಟು ಆಳಕ್ಕೆ ಬೇರು ಬಿಟ್ಟಿದೆ ಈ ದೇವದಾಸಿ ಪದ್ಧತಿ ನಿಲ್ಲಲು ಕಾರಣ ದೇವರ ಶಾಪದಿಂದ ತಪ್ಪಿಸಿಕೊಳ್ಳಲು ಕುಟುಂಬದಲ್ಲಿನ ಒಬ್ಬಳು ಸದಸ್ಯೆ ದೇವರಿಗಾಗಿಯೇ. ಜೀವಿಸುತ್ತಾ ಅವಿವಾಹಿತಳಾಗಿಯೇ ಉಳಿಯುವಂತದ್ದು.

- ಹಿರಿಯರ ಕಷ್ಟಗಳನ್ನು ಹೋಗಲಾಡಿಸುವುದಕ್ಕಾಗಿ ಇರಬಹುದು.
- ಗಂಡುಮಕ್ಕಳು ಬೇಕೆಂಬ ಆಶೆಯಿಂದಲಾದರೂ ಇರಬಹುದು.
- ಪ್ರತಿ ಕುಟುಂಬದಲ್ಲೂ ಎಲ್ಲಮ್ಮನಿಗೆ ದೀಪ ಹಚ್ಚಲು ಒಬ್ಬ 'ಜೋಗಿತಿ' ಅಗತ್ಯವಿರುತ್ತದೆ ಎನ್ನುವ ಉದ್ದೇಶದಿಂದಲಾದರೂ ಇರಬಹುದು.
- ಸಂಪ್ರದಾಯ ಮುರಿಯುವವರಿಗೆ ಅನಾಹುತವಾಗುತ್ತದೆಂಬ (ದೇವತೆ ಶಾಪ ಕೊಡುತ್ತಾಳೆ ಎಂದು ಅಂದುಕೊಂಡು ಅದನ್ನು ಪರಿಹರಿಸಲು ದೇವದಾಸಿಯಾಗುವುದು).
- ಹೆಣ್ಣನ್ನು ದೇವದಾಸಿಯಾಗಿಸಬೇಕೆಂಬುದು ಈ ಕುಟುಂಬಗಳಿಗೆ ಸಂತಸದ ಸಂದರ್ಭ. ದೇವಾಲಯದಲ್ಲೋ ಅಥವಾ ಮನೆಯಲ್ಲೊ ನಡೆಯುವ ಈ ಶುಭ ಮುಹೂರ್ತದಲ್ಲಿ ತಮ್ಮ ಮಗಳಿಗಾಗಿ ಹೆಚ್ಚು ಬೆಲೆಕೊಡುವವನಿಗೆ ಬಂಧು ಬಾಂದವರ ಸಮಕ್ಷಮದಲ್ಲಿ ಮಾರಾಟ ಮಾಡಲಾಗುತ್ತದೆ. ಕ್ರಮೇಣ ಅವಳಲ್ಲಿ ಅವನು ಆಸಕ್ತಿ ಕಳಕೊಂಡರೆ ಅವಳು ಸಾರ್ವಜನಿಕ ಸ್ತ್ರೀಯಾಗುತ್ತಾಳೆ.

ದೇವಾಲಯದ ಸಂಖ್ಯೆ ಹೆಚ್ಚಾಗುತ್ತಾ ಹೋದಂತೆ ದೇವದಾಸಿಯರು ಅಥವಾ ದೇವಾಲಯದ ಸ್ತ್ರೀಯರು ಕೂಡ ಗಣನೀಯ ಮಟ್ಟದ ಸ್ಥಾನವನ್ನು ಆಕ್ರಮಿಸಿಕೊಂಡರು. ಎಲ್ಲಮ್ಮ ದೇವಾಲಯದಲ್ಲಿ ದೇವದಾಸಿಯರು ಪೂರ್ಣ ಪ್ರಮಾಣದಲ್ಲಿ ಇದ್ದರು. ರಾಜಾಶ್ರಯವನ್ನು ಹೊಂದಿದ್ದ ದೇವದಾಸಿಯರು ದೇವಾಲಯದ ಪೂಜಾರಿಗಳ ಬೆಂಬಲ ಗಳಿಸಿಕೊಂಡು, ತಮ್ಮ ನರ್ತನ, ಗಾಯನದ ಮುಖಾಂತರ ದೇವತೆಗೆ ಸೇವೆ ಸಲ್ಲಿಸಿ ಬರುವ ಭಕ್ತರನ್ನು ತಣಿಸಿದರು.

ಒಟ್ಟಿನಲ್ಲಿ ಹೆಣ್ಣನ್ನು ದೇವರಿಗೆಂದು, ದೇವರ ಸೇವೆಗಾಗಿಯೇ ಎಂದು ಬಿಟ್ಟು ಆಕೆಯ ದೇಹದ ಸುಖವನ್ನು ಪಡೆಯುವುದಕ್ಕೋಸ್ಕರ ಪುರೋಹಿತರನ್ನು ಮುಂದಿಟ್ಟುಕೊಂಡು ಇಂತಹ ಹೆಣ್ಣುಮಕ್ಕಳನ್ನು ಶೋಷಿಸುತ್ತಿರುವುದು ಮೇಲ್ ವರ್ಗದವರು. ಇಂತಹ ಅಮಾಯಕ ಹೆಣ್ಣುಮಕ್ಕಳನ್ನು ದೇವರ ಹೆಸರಿನಲ್ಲಿ ದುರುಪಯೋಗ ಮಾಡಿಕೊಳ್ಳುತ್ತಿದ್ದಾರೆ. ಇಂತಹ ಒಂದು ಅವಸ್ಥೆ ಮೇಲ್ ಜಾತಿಯ ಹೆಣ್ಣುಮಕ್ಕಳಿಗೆ ಬರದಂತೆ ಎಚ್ಚರ ವಹಿಸಿದವರು ಪಟ್ಟಭದ್ರ ಹಿತಾಸಕ್ತರು. ಆದರೆ ಇಂತಹ ಅನ್ಯಾಯ ಒದಗಿದ್ದು ಕೆಳಜಾತಿಯ ಹೆಣ್ಣುಮಕ್ಕಳಿಗೆ.

ಲೈಂಗಿಕ ಶೋಷಣೆಯ ಇತಿಹಾಸವು ಸ್ತ್ರೀ ಮತ್ತು ಪುರುಷ ಸಂಬಂಧದಷ್ಟೆ ಹಳೆಯದು. ವಿವಾಹ ಸಂಸ್ಥೆಯ ಜೊತೆ ಜೊತೆಗೆ ಹುಟ್ಟಿ ಬೆಳೆದು ವಿಕಾಸಹೊಂದಿರುವ ಸ್ತ್ರೀ ಶೋಷಣೆಯು ಆರಂಭದಲ್ಲಿ 'ವೃತ್ತಿ'ಯಂತಿದ್ದು ಈಗ ಅದೊಂದು ಗಂಭೀರವಾದ ಪಿಡುಗಾಗಿದೆ. ವೇಶ್ಯಾವಾಟಿಕೆಯು ಶತಮಾನಗಳಷ್ಟು ಹಳೆಯದಾಗಿದೆ. ದೇವರ ಸೇವೆಗಾಗಿ ಬಿಟ್ಟಂತಹ 'ದೇವದಾಸಿಯರು' ಎಂಬ ಹೆಸರಿನಿಂದ, ರಾಜರ ಸೇವೆಯಲ್ಲಿ ತೊಡಗಿದ 'ರಾಜನರ್ತಕಿಯರು, ನೃತ್ಯಗಾರ್ತಿಯರು, ಗಾಯಕಿಯರು ಎಂಬ ಹೆಸರಿನಿಂದ, ಸಂಪ್ರದಾಯದ ನೆಲೆಯಲ್ಲಿ 'ಜೋಗಿತೆಯರು, ಬಸವಿಯರು , ನಿತ್ಯ ಸುಮಂಗಲಿಯರು' ಎಂಬ ಹೆಸರಿನಿಂದ ಅದೆಷ್ಟೊ ಹೆಣ್ಣು ಮಕ್ಕಳು ಈ ವೇಶ್ಯಾವಾಟಿಕೆಯನ್ನು ಅವಲಂಬಿಸಿ ಕೊಂಡು ಬಂದಿದ್ದು ಸಮಾಜದಲ್ಲಿ ಇದೊಂದು ಅನಿಷ್ಟ ಪದ್ಧತಿಯಾಗಿ ಈಗಲೂ ವಿಶ್ವವ್ಯಾಪಿಯಾಗಿ ಬೇರು ಬಿಟ್ಟಿದೆ. ರಾಜ ಮಹಾರಾಜರ, ಶ್ರೀಮಂತರ ಮನರಂಜನೆಗಾಗಿ ಹಾಗೂ ಯುದ್ಧದಲ್ಲಿ ಸೋತ ರಾಜನು ಗೆದ್ದ ರಾಜನಿಗೆ ತಮ್ಮ ಪ್ರೀತಿಯ ವೇಶ್ಯೆಯನ್ನು ಕಳಿಸುವುದು ತೀರ ಸಾಮಾನ್ಯವಾಗಿತ್ತು.

ಮಧ್ಯ ಕಾಲೀನ ಯುಗದಲ್ಲೂ ವೇಶ್ಯಾವಾಟಿಕೆಗೆ ಹೆಚ್ಚಿನ ಮಹತ್ವ ನೀಡಲಾಗಿತ್ತು. ಮೊಗಲ್ ಬಾದಶಹ ಅಕ್ಬರ್ ಹಾಗೂ ಹೈದರಾಬಾದಿನ ನಿಜಾಮರು ನೂರಾರು ಮಂದಿ ವೇಶ್ಯೆಯರನ್ನು ಉಪಪತ್ನಿಯರನ್ನಾಗಿ ಹೊಂದಿದ್ದರು ಎಂಬುದು ಲೋಕ ಪ್ರಸಿದ್ಧಿ ಆಗಿದೆ. ಮೊಗಲ್ ಸಾಮ್ರಾಜ್ಯದ ಅವನತಿಯ ನಂತರ ಗಾಯಕಿಯರು, ನೃತ್ಯಗಾರ್ತಿಯರು, ಹಾಗು ವೇಶ್ಯೆಯರು ತಮ್ಮ ಪ್ರತಿಷ್ಠಿತವಾದ ಸ್ಥಾನಮಾನ ಕಳೆದುಕೊಂಡು ಬೇರಾವ ಕುಶಲ ಕಲೆಯಲ್ಲಿ ನೈಪುಣ್ಯತೆಯನ್ನು ಹೊಂದಿರದೆ ಅನಿವಾರ್ಯವಾಗಿ ತಮ್ಮ ಜೀವನೋಪಾಯಕ್ಕಾಗಿ 'ಲೈಂಗಿಕ ವ್ಯಾಪಾರ'ವನ್ನು ಅವಲಂಬಿಸಬೇಕಾಯಿತು. ಬಹಳ ವರ್ಷಗಳ ಹಿಂದೆ ದೈವ ಭಕ್ತಿಗೆ ಹೆಸರಾದ ಕಾಲವೊಂದಿತ್ತು. ಅಂದು ಮಕ್ಕಳಿಲ್ಲದ ದಂಪತಿಗಳು ತಮಗೆ ಹೆಣ್ಣು ಮಗುವಾದರೆ ಆ ಮಗುವನ್ನು ದೇವರಿಗೆ ಮುಡುಪಾಗಿಡುತ್ತೇನೆ

ಎಂದು ಹರಕೆ ಹೊರುತ್ತಿದ್ದರು. ನಂತರ ಹುಟ್ಟಿದ ಮಗು ಹೆಣ್ಣಾದರೆ ಅವರ ಅಭಿಲಾಷೆಯ ಪ್ರಕಾರ ದೇವಸ್ಥಾನಕ್ಕೆ ಯುವತಿಯನ್ನು ಒಪ್ಪಿಸಿ ಬಿಡುತ್ತಿದ್ದರು. ಇದನ್ನು ಬಸವಿ ಬಿಡುವುದು ಎಂದು ಕರೆಯಲಾಗಿದ್ದು ಆ ಬಸವಿಯರನ್ನು ದೇವದಾಸಿಯರು ಎಂದು ಕರೆಯಲಾಯಿತು. ದೇವರ ಸೇವೆ, ನೃತ್ಯ, ಉಪಾಸನೆ ಮುಂತಾದವು ಮುಂದೆ ಅರ್ಥ ಕಳೆದು ಕೊಂಡು ಆ ಹೆಣ್ಣು ಮಕ್ಕಳನ್ನು ಗಂಡಸರು ತಮ್ಮ ಕಾಮ ತೃಷೆಗಾಗಿ, ದೌರ್ಜನ್ಯಕ್ಕಾಗಿ ದೇವಸ್ಥಾನದಲ್ಲಿ ನರ್ತಿಸುವ ಯುವತಿಯರನ್ನು ವೇಶ್ಯೆಯರನ್ನಾಗಿಸಿದರು ಎಂದು ಹಲವು ಮೂಲಗಳು ತಿಳಿಸಿವೆ.

ಮೊಗಲರ ಆಳ್ವಿಕೆ ಕೊನೆಯಾದಂತೆ ಆರಂಭವಾದ ಅಂದಿನ ಗಾಯಕಿಯರು, ನರ್ತಕಿಯರು, ವೇಶ್ಯೆಯರು ತಮ್ಮ ವೃತ್ತಿಗಳನ್ನು ಕಳೆದುಕೊಳ್ಳಬೇಕಾಯಿತು. ಬೇರಾವ ಕೆಲಸಗಳು ಅವರಿಗೆ ತಿಳಿಯದ ಕಾರಣ ಲೈಂಗಿಕ ವ್ಯಾಪಾರವೇ ದಾರಿಯಾಯಿತು. ಈ ಎಲ್ಲಾ ಆಧಾರಗಳಿಂದಲೂ ಬಹಳ ಕಾಲದಿಂದಲೂ ಲೈಂಗಿಕ ವೃತ್ತಿ ಸಮಾಜದ ಒಂದು ಅಂಗವಾಗಿ ಪರಿಣಮಿಸಿತು. ಇಂದು ಲೈಂಗಿಕ ವೃತ್ತಿಯು ಮೈಮಾರಿ ಕೊಳ್ಳುವ ಒಂದು ಪದ್ಧತಿಯಾಗಿ ಅಥವಾ ಪಿಡುಗಾಗಿ ಪರಿಣಮಿಸಿದೆ.

ಬ್ರಿಟಿಷರ ಆಳ್ವಿಕೆಯ ಕಾಲದಲ್ಲೂ ವೇಶ್ಯಾವೃತ್ತಿಯಲ್ಲಿ ತೊಡಗಿರುವವರ ಸ್ಥಿತಿಗಳಲ್ಲಿ ಗಮನಾರ್ಹವಾದ ಸುಧಾರಣೆಗಳೇನೂ ಕಂಡುಬರಲಿಲ್ಲವಾದ್ದರಿಂದ ಅನಿವಾರ್ಯವಾಗಿ ಇವರು ಮೈಮಾರಿಕೊಂಡು ಜೀವಿಸಬೇಕಾದ ಅನಿವಾರ್ಯತೆ ಒದಗಿತು.

ವೇಶ್ಯಾವೃತ್ತಿ ಹೆಚ್ಚಾಗಲು ಹಲವಾರು ಕಾರಣಗಳನ್ನು ಹೇಳಬಹುದು.

- ಬಡತನ ಮತ್ತು ಹಸಿವು ವೇಶ್ಯಾವೃತ್ತಿಗೆ ಮುಖ್ಯಕಾರಣವಾಗಿದೆ. ಶೇ80% ರಷ್ಟು ಸ್ತ್ರೀಯರು ಈ ಕಾರಣಕ್ಕಾಗಿ ಈ ವೃತ್ತಿಗೆ ಇಳಿದರೆ ಇನ್ನು ಉಳಿದ 20% ರಷ್ಟು ಸ್ತ್ರೀಯರು ತಾವಾಗಿಯೇ ಇಚ್ಚೆಯಿಂದ ಈ ವೃತ್ತಿಗೆ ಇಳಿದಿದ್ದಾರೆ.

- ಸಾಮಾಜಿಕ ಕಾರಣಗಳು ಕೂಡ ವೇಶ್ಯಾವೃತ್ತಿ ಹರಡಲು ಮುಖ್ಯ ಕಾರಣವಾಗಿದೆ. ಕುಟುಂಬದಲ್ಲಿನ ಆರ್ಥಿಕ ತೊಂದರೆಯಿಂದಾಗಿ ತಂದೆ–ತಾಯಿಗಳು ಪರೋಕ್ಷವಾಗಿ ಲೈಂಗಿಕ ವೃತ್ತಿಯನ್ನು ಪ್ರೋತ್ಸಾಹಿಸುತ್ತಾರೆ. ಕುಟುಂಬದ ಸದಸ್ಯರು ಕೊಡುವ ಕಿರುಕುಳ, ಕೊರತೆಗಳು ಕೂಡ ಲೈಂಗಿಕ ವೃತ್ತಿಗೆ ಸಹಕಾರಿಯಾಗಿದೆ. ನಗರ ಪ್ರದೇಶದ ಹೆಣ್ಣು ಮಕ್ಕಳು ವಿವಿಧ ಆಮಿಷಗಳಿಗೆ ಬಲಿಯಾಗಿ ಕುಟುಂಬವನ್ನು ತೊರೆದು ಈ ವೃತ್ತಿಯನ್ನು ಹಿಡಿಯುವ ಮನಸ್ಸು ಮಾಡುತ್ತಾರೆ.

- ಬಹು ಪತ್ನಿತ್ವ, ವಿಧವಾ ಮರುವಿವಾಹದ ಮೇಲೆ ನಿರ್ಬಂಧನೆ, ವಿವಾಹ ವಿಚ್ಛೇದನೆ, ಅಸಂತೃಪ್ತಿ ದಾಂಪತ್ಯ ಜೀವನ, ವರದಕ್ಷಿಣೆಯ ಕ್ರೌರ್ಯ, ಬಾಲ್ಯವಿವಾಹ ಈ ಎಲ್ಲಾ ಕಾರಣಗಳಿಂದಲೂ ಈ ವೇಶ್ಯಾವೃತ್ತಿಗೆ ಇಳಿಯಲು ಕಾರಣವಾಗುತ್ತದೆ.
- ಕೆಲವು ಹೆಣ್ಣುಮಕ್ಕಳು ಲೈಂಗಿಕ ವೃತ್ತಿಯ ಬಗ್ಗೆ, ಅದರಿಂದ ಪ್ರಾಪ್ತವಾಗಬಹುದೆಂದು ಹೇಳಲಾಗುವ ಐಶ್ವರ್ಯ , ಧನಸಂಪತ್ತು, ಶ್ರೀಮಂತ ಸ್ನೇಹಿತರ ಒಡನಾಟ, ಹೈ ಸೊಸೈಟಿಯ ಬದುಕು, ಆನಂದ, ಐಶಾರಾಮ ಮುಂತಾದ ಸುಖಮಯ ಜೀವನದ ಆಸೆಗಾಗಿ ಮರುಳಾಗುವ ಹೆಣ್ಣು ಮಕ್ಕಳು ತಮ್ಮನ್ನು ತಾವೇ ಈ ವೃತ್ತಿಗೆ ನೂಕಿಕೊಂಡು ಬದುಕುತ್ತಿದ್ದಾರೆ.

- ಜೀವನದಲ್ಲಿ ಅಭದ್ರತೆ, ಅಸುರಕ್ಷಿತ ಹಾಗೂ ಅನಾಥೆಯ ಸಮಸ್ಯೆಗೆ ಸಿಲುಕಿರುವಂತಹ ಹೆಣ್ಣು ಮಕ್ಕಳಿಗೆ ಕೆಲವು ಸಮಾಜ ವಿರೋಧಿ ಶಕ್ತಿಗಳು ಇಲ್ಲ ಸಲ್ಲದ ಆಸೆಗಳನ್ನು ಹುಟ್ಟಿಸಿ, ದೂರದ ಪಟ್ಟಣದಲ್ಲಿ ಒಳ್ಳೆಯ ನೌಕರಿ ಕೊಡಿಸುವ, ಸಿನಿಮಾದಲ್ಲಿ ನಟಿಸಲು ಅವಕಾಶ ಕಲ್ಪಿಸುವ, ಒಳ್ಳೆಯ ಗಂಡು ಹುಡುಕಿ ಮದುವೆ ಮಾಡುವ ಅಥವಾ ತಾವೇ ಮದುವೆ ಮಾಡಿಕೊಳ್ಳುವ ಹಾಗೂ ಇನ್ನಿತರ ಬಗೆಯ ಭರವಸೆಗಳನ್ನು ಹುಟ್ಟಿಸಿ, ಮೋಸ ವಂಚನೆಯಿಂದ ಲೈಂಗಿಕ ಗೃಹಗಳಿಗೆ ಮಾರುವುದುಂಟು ಈ ರೀತಿಯಿಂದಲೂ ಹೆಣ್ಣುಮಕ್ಕಳು ಮೋಸ ಹೋಗಿ ಜೀವನ ಸಾಗಿಸುತ್ತಿದ್ದಾರೆ.
- ಆಧುನಿಕ ಯುವಕ ಯುವತಿಯರಲ್ಲಿ ಕಾಣಬರುವ ಭೋಗ ಪ್ರಿಯತೆ, ಅನಿರ್ಬಂಧಿತ ಲೈಂಗಿಕಾಪೇಕ್ಷೆ, ಸಮಯೋಚಿತವಲ್ಲದ ಲೈಂಗಿಕ ತೃಪ್ತಿಯ ಬಯಕೆ, ಅಶ್ಲೀಲ ಸಾಹಿತ್ಯಗಳಲ್ಲಿ ಹಾಗೂ ನಗ್ನ ಚಿತ್ರಗಳಲ್ಲಿ ಆಸಕ್ತಿ, ಕಾಮೋದ್ರೇಕವನ್ನು ಹೆಚ್ಚಿಸುವ 'ಬ್ಲೂಫಿಲ್ಮ್'ಗಳಲ್ಲಿ ಆಸಕ್ತಿ, ಚಲನ ಚಿತ್ರಗಳಲ್ಲಿ ಕಾಣಬರುವ ನಾಯಕ ನಾಯಕಿಯರ ಪ್ರಣಯ ದೃಶ್ಯಗಳನ್ನು ನಿಜ ಜೀವನದಲ್ಲಿ ಅನುಕರಿಸುವ ಪ್ರಯತ್ನ ಇವು ಅಪ್ರಾಪ್ತ ವಯಸ್ಸಿನಲ್ಲಿ ಲೈಂಗಿಕ ತೃಪ್ತಿಯ ಹುಚ್ಚು ಹಿಡಿಯುವಂತೆ ಮಾಡಿ ವೇಶ್ಯಾವೃತ್ತಿಗೆ ಪ್ರಚೋದನೆ ನೀಡಬಲ್ಲವು. ಇದರಿಂದ ಚಿಕ್ಕ ವಯಸ್ಸಿನಲ್ಲಿಯೇ

ಗರ್ಭಿಣಿಯಾಗಿ ನಂತರ ಬೇರೆ ದಾರಿ ಇಲ್ಲದೇ ವೇಶ್ಯಾ ವೃತ್ತಿ ಹಿಡಿದಿರುತ್ತಾರೆ.

- ಕುಟುಂಬದ ಆರ್ಥಿಕ ದುರವಸ್ಥೆ, ತನಗಾಗಿ ಮತ್ತು ತನ್ನವರು ಯಾರು ಇಲ್ಲವೆಂಬ ನಿರ್ಗತಿಕನ ಅಥವಾ ಅನಾಥತೆ, ನಿರುದ್ಯೋಗ, ದುಡಿಯುವ ಗಂಡನ ಅಕಾಲಿಕ ಮರಣ, ತಾಯ್ತಂದೆಯರಿಂದ ಆರ್ಥಿಕ ಸಹಾಯ ಲಭ್ಯವಿಲ್ಲದಿರುವಿಕೆ. ಹೀಗೆ ಬಡತನ, ಆರ್ಥಿಕ ಅಭದ್ರತೆ ಮತ್ತು ಉತ್ಪಾದನಾ ಮೂಲಗಳ ಕೊರತೆಯೇ ಈ ವೃತ್ತಿ ಹಿಡಿದು ಬದುಕಲು ಕಾರಣವಾಗಿದೆ.

- ಮಾನಸಿಕ ಅಸ್ವಸ್ಥತೆ, ಚಂಚಲ ಮನಸ್ಸು, ಮಂದ ಬುದ್ಧಿ, ಅಜ್ಞಾನ ಮುಂತಾದ ಸಂಗತಿಗಳು ಕೂಡ ವೇಶ್ಯಾ ವೃತ್ತಿಗೆ ಪ್ರಚೋದನೆ ನೀಡಬಲ್ಲವು.

- ಧಾರ್ಮಿಕ ಕಾರಣಗಳಿಂದಾಗಿಯೂ ಕೂಡ ವೇಶ್ಯಾವೃತ್ತಿ ಹೆಚ್ಚಲು ಕಾರಣವಾಯಿತು. ನಮ್ಮ ದೇಶದಲ್ಲಿ ಹಲವಾರು ಅನಿಷ್ಠ ಸಂಪ್ರದಾಯಗಳನ್ನು ದೇವರ, ದೈವದ ಮತ್ತು ಧರ್ಮದ ಹೆಸರಿನ ಮೇಲೆ ಮುಂದುವರೆಸಿಕೊಂಡು ಬಂದಿರುತ್ತಾರೆ. ದೇವರ ಹೆಸರಿನಿಂದ ಓರ್ವ ಹೆಣ್ಣನ್ನು ಅನೈತಿಕ ವ್ಯವಹಾರಗಳಲ್ಲಿ ತೊಡಗಿಸುವ, ಲೈಂಗಿಕ ವೃತ್ತಿಗೆ ತಳ್ಳುವ ಪದ್ಧತಿಗಳಿಗೆ ನಮ್ಮಲ್ಲಿ ದೇವದಾಸಿ ಪದ್ಧತಿ, ಬಸವಿಯರ ಪದ್ಧತಿ, ಗೆಜ್ಜೆಪೂಜೆ, ಜೋಗತಿಯರಾಗುವುದು, ಬೆತ್ತಲೆ ಸೇವೆ ಮುಂತಾದ ಹೆಸರುಗಳುಂಟು. ದೇವರ ಸೇವೆಗೆಂದು ದೇವಾಲಯಗಳಲ್ಲಿ ನಿಯಮಿಸಲ್ಪಟ್ಟ ಯುವತಿಯರನ್ನು ದೇವದಾಸಿಯರೆಂದು ಕರೆಯುತ್ತಾರೆ. ನೃತ್ಯ, ಗಾಯನ, ಭಜನೆ, ಅರ್ಚನೆ, ಮುಂತಾದ ಚಟುವಟಿಕೆಗಳ ಮುಖಾಂತರ ದೇವದಾಸಿಯರು ದೇವರ ಪೂಜೆ ಮಾಡಬೇಕೆಂದು ನಿಯಮವಿತ್ತು. ಈ ರೀತಿಯ ಮಹಿಳೆಯರನ್ನು ಇಡೀ ಸಮಾಜದ ಸೊತ್ತೆಂದು ಭಾವಿಸಲಾಗುತ್ತದೆ. ದೇವಾಲಯದ ಹೊರಗಡೆ ವಿವಿಧ ಧಾರ್ಮಿಕ ಸಭೆ ಸಮಾರಂಭಗಳಲ್ಲಿ ಹಾಡುವುದು, ನೃತ್ಯಮಾಡುವುದು, ಇವರ ಉಪಜೀವನದ ಮಾರ್ಗವಾಗಿದ್ದಿತು. ದೇವದಾಸಿಯರನ್ನು ಸಮಾಜದ ಗಣ್ಯ ಮತ್ತು ಶ್ರೀಮಂತ ವರ್ಗದ ವ್ಯಕ್ತಿಗಳು ತಮ್ಮ ಲೈಂಗಿಕ ಸುಖಕ್ಕಾಗಿ ಬಳಸಿಕೊಳ್ಳತೊಡಗಿದರು. ಜೀವನಪರ್ಯಂತ ಅವಿವಾಹಿತ ರಾಗಿಯೇ ಉಳಿಯುತ್ತಿದ್ದ ಈ ವರ್ಗದ ಹೆಣ್ಣು ಮಕ್ಕಳು ಒಂದು

ರೀತಿಯಿಂದ ಧಾರ್ಮಿಕ ಲೈಂಗಿಕ ವೇಶ್ಯೆಯರೆಂದೇ ಕರೆಸಿಕೊಂಡು ಬದುಕುತ್ತಿದ್ದಾರೆ. ಮುಂಬೈ ನಗರದ ಲೈಂಗಿಕ ಕಾರ್ಯಕರ್ತೆಯರಲ್ಲಿ ಹೆಚ್ಚಿನ ಸಂಖ್ಯೆ ಮಹಿಳೆಯರು ದೇವದಾಸಿ ಮತ್ತು ಬಸವಿಯ ಪದ್ಧತಿಗೆ ಒಳಪಟ್ಟವರು. ಕೆಲವೊಂದು ಜಾತಿ ಮತ್ತು ಉಪಜಾತಿಗಳಲ್ಲಿ ಇದು ಅನುವಂಶಿಕ ಉದ್ಯೋಗವೆಂದು ಭಯ ಭಕ್ತಿಯಿಂದ ಮುಂದುವರೆದು ಕೊಂಡು ಬಂದಿದೆ. ಶಿವಮೊಗ್ಗ ಜಿಲ್ಲೆಯ ಚಂದ್ರಗುತ್ತಿಯಲ್ಲಿ ರೇಣುಕಾಂಬೆ ದೇವಾಲಯದಲ್ಲಿ ಪ್ರತಿವರ್ಷ ಆಚರಿಸಲಾಗುತ್ತಿರುವ ಬೆತ್ತಲೆ ಸೇವೆಯೂ ಕೂಡ ಧಾರ್ಮಿಕ ಲೈಂಗಿಕ (ವೇಶ್ಯಾವೃತ್ತಿ)ಯ ನಿರ್ದಶನವಾಗಿದೆ.

ವೇಶ್ಯಾ ವೃತ್ತಿಯನ್ನು ಅವಲಂಬಿಸಿರುವುದರಿಂದ ಹೆಣ್ಣು ಮಕ್ಕಳು ನಾನಾ ರೀತಿಯ ದುಷ್ಪರಿಣಾಮಗಳಿಗೂ ಎಡೆ ಮಾಡಿಕೊಡುತ್ತಾರೆ.

ವೇಶ್ಯಾವೃತ್ತಿಯಿಂದ ಸಿಫ್ಲಿಸ್, ಗಾನೋರಿಯಾದಂತಹ ಲೈಂಗಿಕ ರೋಗಕ್ಕೆ ತುತ್ತಾಗಿ ನರಳುತ್ತಾರೆ.

- ವೇಶ್ಯಾವೃತ್ತಿ ಸುಲಭವಾಗಿ ನಡೆದುಕೊಂಡು ಹೋಗಬೇಕಾದರೆ ಅದಕ್ಕೊಬ್ಬಳು ಯಜಮಾನಿ ಇರುತ್ತಾಳೆ. ಈಕೆಯನ್ನು ಅಕ್ಕ, ಮೇಡಂ, ಮಮ್ಮಿ, ಮದರ್, ಘರ್‌ವಾಲಿ ಮುಂತಾದ ಹೆಸರುಗಳಿಂದಲೂ ಕರೆಯುತ್ತಾರೆ. ಇವಳು ವೇಶ್ಯೆಯರ ಯೋಗ ಕ್ಷೇಮವನ್ನು ನೋಡಿಕೊಂಡು ಗಿರಾಕಿಗಳನ್ನು ಇವರಿಗೆ ಒದಗಿಸಿ ಕೊಡುತ್ತಾಳೆ. ಇಂತಹ ವೇಶ್ಯೆಯರು ತಾವು ದುಡಿದಿದ್ದರಲ್ಲಿ ಇಂತಿಷ್ಟು ಎಂದು ಘರ್‌ವಾಲಿಗೆ ಕೊಡಬೇಕು. ಇಲ್ಲದಿದ್ದರೆ ಅವರನ್ನು ಹೊಡೆದು ಬಡಿದು ಹಿಂಸೆ ಮಾಡಿಸುತ್ತಾರೆ. ಇವರನ್ನು ನೋಡಿಕೊಳ್ಳಲು ಘರವಾಲಿ ಗೂಂಡಾಗಳನ್ನು ಸಾಕಿರುತ್ತಾಳೆ. ಹೀಗೆ ಅವಳ ಶೋಷಣೆ ದಿನಂ ಪ್ರತಿ ನಡೆಯುತ್ತದೆ.

ದಿನ ಕಳೆದಂತೆ ಲೈಂಗಿಕ ಪದ್ಧತಿಯು ಒಂದು ವ್ಯವಸ್ಥಿತ ಸಂಸ್ಥೆಯಾಗಿ ಬೆಳೆಯುತ್ತಲಿದೆ. ಲೈಂಗಿಕ ಗೃಹಗಳ ಮಾಲೀಕರು ಈ ಉದ್ಯೋಗಕ್ಕಾಗಿ ಸ್ತ್ರೀಯರನ್ನು ಸರಬರಾಜು ಮಾಡುವ ಹಾಗೂ ಪುರುಷರನ್ನು ಕರೆದುಕೊಂಡು ಬರುವ ಮಧ್ಯವರ್ತಿಗಳು ಸಮಾಜದ ಆರೋಗ್ಯಕರ ವಾತಾವರಣವನ್ನು ಕಲುಷಿತ ಗೊಳಿಸಿ ಹಲವಾರು ರೀತಿಯಿಂದ ಮಹಿಳಾ ಶೋಷಣೆಗೆ ದಾರಿ ಮಾಡಿಕೊಡುತ್ತದೆ. ಮಹಿಳೆಯರ ಮೇಲೆ ದೌರ್ಜನ್ಯ, ಹಿಂಸೆಗಳು ಹೆಚ್ಚುತ್ತದೆ.

ದೇವರು ಮತ್ತು ದೈವದ ಹೆಸರಿನಿಂದ ನಮ್ಮ ದೇಶದಲ್ಲಿ ಕಂಡು ಬರುವ ದೇವದಾಸಿ ಪದ್ಧತಿ, ಗಜ್ಜೆಪೂಜೆ, ಬಸವಿ, ಜೋಗತಿ, ನಿತ್ಯ ಸುಮಂಗಲೆ ಮುಂತಾದ ಚಟುವಟಿಕೆಗಳು ಧರ್ಮದ ಬಗೆಗೆ ಜನರಲ್ಲಿ ಅಸಹ್ಯ ಭಾವನೆಗಳನ್ನು ಹುಟ್ಟಿಸುತ್ತದೆ. ಲೈಂಗಿಕ ವೃತ್ತಿಗೆ ಆಸ್ಪದ ನೀಡುವ ಕ್ಲಬ್ಬು, ಬಾರು, ಟರ್ಕಿಷ್ ಸ್ನಾನ ಗೃಹಗಳು, ಪೋಲಿಸ್ ಸಂಸ್ಥೆ, ಕೆಂಪುದೀಪ ಪ್ರದೇಶಗಳು ಸಮಾಜದಲ್ಲಿ ಅಹಿತಕರ ವಾತಾವರಣವನ್ನು ಸೃಷ್ಟಿ ಮಾಡುತ್ತಿವೆ. ಇವನ್ನೆಲ್ಲಾ ನಡೆಸುವವರು ಪುರುಷರೇ ಆಗಿರುತ್ತಾರೆ. ಪುರುಷರ ಈ ಬಗೆಯ ವರ್ತನೆಯು ಶುದ್ಧ ಧಾರ್ಮಿಕತೆಯದಲ್ಲ. ಧರ್ಮ ಶ್ರದ್ಧೆಯ ಆಧ್ಯಾತ್ಮಿಕತೆಗೆ ಬೇರೆ ಬೇರೆ ಆಯಾಮಗಳಿವೆ. ಅಂತಹ ವಿಷಯಗಳಲ್ಲು ಲಿಂಗ ತಾರತಮ್ಯ ಜಾತಿ ತಾರತಮ್ಯಗಳು ಕೆಲಸ ಮಾಡುತ್ತವೆ. ಧಾರ್ಮಿಕ ಸಂಸ್ಥೆಗಳು ಹೆಣ್ಣಿನ ಅವಕಾಶಗಳಿಗೆ ಸದಾ ಬಾಗಿಲು ಮುಚ್ಚಿರುತ್ತದೆ ಎಂಬುದು ಹಳೆಯ ಮಾತು. ಆದರೆ ಕೆಲ ಸ್ವಾಮಿಜಿಗಳು ಕೂಡ ಮಹಿಳೆಯರ ಮೇಲೆ ಅತಿಕ್ರಮಣ ಮಾಡುವ ಘಟನೆಗಳು ತೆರೆಮರೆಯಲ್ಲಿ ಘಟಿಸುತ್ತಲೆ ಇರುತ್ತವೆ.

ಈ ಬಗೆಯ ಎಲ್ಲ ಶೋಷಣೆಗಳನ್ನು ಧರ್ಮವು ಅಂಗೀಕರಿಸಿದ್ದರಿಂದಲೆ ನಮ್ಮ ಸಮಾಜದಲ್ಲಿ ಅನಿಷ್ಟ ಆಚಾರ ವಿಚಾರಗಳು ಮೇಲುಗೈ ಸಾಧಿಸಿದ್ದುದು. ಸಮಕಾಲೀನ ಸಮಾಜದಲ್ಲಿ ವೇಶ್ಯಾವಾಟಿಕೆಯಂತಹ ಹಲವು ವೃತ್ತಿಗಳು ಹುಟ್ಟಿ ಅವು ವಿಕೃತ ರೂಪ ತಾಳುತ್ತಿರುವುದಕ್ಕೂ ಪರೋಕ್ಷವಾಗಿ ಧರ್ಮ ಕಾರಣವಾಗಿದೆ. ಬೆತ್ತಲೆ ಸೇವೆ, ದೇವದಾಸಿ ಪದ್ಧತಿಗಳು ಧಾರ್ಮಿಕ ಆವರಣದಲ್ಲಿ ಹೇಗೆ ಘಟಿಸಿ ಕೆಳಜಾತಿ ಹೆಣ್ಣುಗಳನ್ನು ಕೂಪಕ್ಕೆ ತಳ್ಳುತ್ತವೆಂಬುದನ್ನು ಕೇವಲ ಅಧ್ಯಯನಕ್ಕೆ ಒಳಪಡಿಸಿದರೆ ಸಾಲದು. ಮುಖ್ಯವಾಗಿ ಇಂತಹ ನೂರಾರು ಅನಿಷ್ಟ ಪದ್ಧತಿಗಳನ್ನು ಸ್ವತಃ ಧಾರ್ಮಿಕ ನಾಯಕರೆ ನಿರಾಕರಿಸಿ ಹೆಣ್ಣಿನ ಸ್ಥಾನಮಾನಗಳನ್ನು ಕಾಪಾಡಬೇಕಾಗಿದೆ. ಮಾನವ ಜನಾಂಗವೆ ತಲೆತಗ್ಗಿಸುವಂತಹ ಕಠೋರ ರೂಡಿಗಳನ್ನು ಸಲಹುವ ಧಾರ್ಮಿಕ ಸಂಹಿತೆಗಳನ್ನು ಧರ್ಮದಿಂದಲೇ ಕೈಬಿಡಬೇಕಾಗಿದೆ. ಹೆಣ್ಣು ಗಂಡುಗಳೆರಡೂ ಧರ್ಮ ಶ್ರದ್ಧೆಯ ನೈತಿಕ ಸಾಕ್ಷಾತ್ಕಾರಕ್ಕೆ ಸಮಾನವಾಗಿ ಅರ್ಹರು, ಪುರುಷ ಸಮಾಜ ಈ ನಿಟ್ಟಿನಲ್ಲಿ ಆಲೋಚಿಸಿದರೆ ಇಬ್ಬರಿಗೂ ಒಳ್ಳೆಯದು, ಧರ್ಮದ ಬಲದಿಂದ ಲಿಂಗ ಶೋಷಣೆ ಮುಂದುವರಿದಿದ್ದರಿಂದ ಅದು ಹೇಗೆ ಸಾಮಾಜಿಕವಾದ ಪಿಡುಗನ್ನು ವಿಸ್ತರಿಸಿತು ಎಂಬುದನ್ನು ಈ ಮುಂದಿನ ಅಧ್ಯಾಯದಲ್ಲಿ ಪರಿಶೀಲಿಸೋಣ.

## ಹೆಣ್ಣ ದೇಹದ ಮೇಲಿನ ಸಾಮಾಜಿಕ ನಿಷೇದ

"ಹೆಣ್ಣು ಸ್ವಾತಂತ್ರ್ಯಕ್ಕೆ ಅರ್ಹಗಳಲ್ಲ" ಎಂಬ ಮನುವಿನ ನಿಷೇಧವು ಅನೇಕ ಮರು ರೂಪಗಳಲ್ಲಿ ಸಾಮಾಜಿಕವಾಗಿ ವ್ಯಾಪಿಸಿಕೊಂಡಿದೆ . ಕುಟುಂಬದ ನಾಲ್ಕು ಗೋಡೆಗಳ ಮಧ್ಯೆ ಪುರುಷ ಸಮಾಜವು ಹೆಣ್ಣನ್ನು ಸೆರೆಯಾಳಾಗಿಸಿದೆ. ಸಾಮಾಜಿಕವಾದ ಅವಕಾಶದಲ್ಲಿ ಹೆಣ್ಣಿಗಿರುವ ಸ್ಥಾನವು ಕನಿಷ್ಠತಮವಾದುದು. ಬಹಿರಂಗವಾಗಿ ಹೆಣ್ಣು ಎಲ್ಲೂ ತನ್ನ ಸ್ವಂತ ಅಪೇಕ್ಷೆಗಳನ್ನು ತೋರಿಕೊಳ್ಳುವಂತಿಲ್ಲ. ಪುರುಷ ಸಮಾಜವು ಎಷ್ಟೊಂದು ಕ್ರೂರವಾಗಿ ಬಲೆ ಹೆಣೆದಿದೆ ಎಂದರೆ ಹೆಣ್ಣು ಬದುಕಿದ್ದು ಸತ್ತಂತೆ ಜಾಲ ರೂಪಿಸಿದೆ. ಗೌರವದ ಅಲಂಕಾರದ ಮುಸುಕನ್ನು ಹೆಣ್ಣಿನ ದೇಹದ ಮೇಲೆ ಪುರುಷ ಸಮಾಜವು ಹೊದ್ದಿಸಿದೆ. ಹೆಣ್ಣು ಹುಟ್ಟುನಿಂದ ಸಾಯುವ ತನಕ ಪರರನ್ನು ಅವಲಂಬಿಸಿಯೆ ಬುದುಕು ಸವೆಸ ಬೇಕಾದ್ದಿದೆ ಸಾವರ್ಜನಿಕವಾದ ಯಾವ ಚಹರೆಯೂ ಹೆಣ್ಣಿಗಿಲ್ಲ. ಸಮಾಜದಲ್ಲಿ ಆಕೆ ಯಾವತ್ತೂ ತಲೆ ತಗ್ಗಿಸಿಯೆ ನಡೆಯಬೇಕು. ಪುರುಷನಾದರೆ ಎದೆ ಸೆಟೆದುಕೊಂಡು ತಲೆ ಎತ್ತಿ ಓಡಾಡಬಹುದು. ಹೆಣ್ಣು ಬಹಿರಂಗವಾಗಿ ಏನನ್ನು ಮಾತನಾಡುವಂತೆಯೂ ಇಲ್ಲ. ಈ ಹಿನ್ನಲೆಯಲ್ಲಿ ಬೆಳೆದು ಬಂದ ಪುರುಷ ಸಮಾಜವು ಹೆಣ್ಣಿನ ಮೇಲೆ ಧರ್ಮ ಮತ್ತು ಸಂಸ್ಕೃತಿಯ ಹೆಸರಿನಲ್ಲಿ ಅನೇಕ ನಿಷೇದಗಳನ್ನು ಹೇರಿದೆ. ಅವುಗಳನ್ನು ಕೆಳಗಿನಂತೆ ಪಟ್ಟಿ ಮಾಡಬಹುದು.

- ಹೆಣ್ಣು ಎಂದೆಂದೂ ಗಂಡಿನ ವಿರುದ್ಧ ನಡೆದುಕೊಳ್ಳುವಂತಿಲ್ಲ.
- ಹೆಣ್ಣು ಯಾವ ಅಧಿಕಾರಗಳಿಗೂ ಯೋಗ್ಯಳಲ್ಲ.
- ಹೆಣ್ಣು ಮುಕ್ತಿ ಮಾರ್ಗಕ್ಕೆ ಅರ್ಹಳಲ್ಲ.
- ಹೆಣ್ಣು ಸಾರ್ವಜನಿಕವಾಗಿ ತನ್ನ ಅಪೇಕ್ಷೆಗಳನ್ನು ಹೇಳಿಕೊಳ್ಳುವಂತಿಲ್ಲ.
- ಹೆಣ್ಣು ಧಾರ್ಮಿಕ ವಿಧಿ ಕ್ರಿಯೆಗಳಿಗೆ ಅರ್ಹಳಲ್ಲ.
- ಹೆಣ್ಣಿಗೆ ಆಸ್ತಿಯಲ್ಲಿ ಪಾಲು ಪಡೆವ ಅಧಿಕಾರವಿಲ್ಲ.
- ಹೆಣ್ಣು ಪತಿಗೆ ಮಾತ್ರ ನಿಷ್ಠಳಾಗಿದ್ದು ಬೇರೆ ಯಾವ ಪರ ಪುರುಷನ ಮುಖವನ್ನು ನೋಡುವಂತಿಲ್ಲ.
- ಗಂಡ ಸತ್ತ ಮೇಲೆ ಹೆಣ್ಣು ವಿಧವೆಯಾಗಿಯೆ ಇರಬೇಕು.
- ಹೆಣ್ಣು ಮಕ್ಕಳ ಮೇಲೆ ಹಕ್ಕು ಚಲಾಯಿಸುವಂತಿಲ್ಲ.
- ಹೆಣ್ಣು ಸದಾ ವಿಧೇಯಳಾಗಿರಬೇಕು. ಯಾವ ಪ್ರಶ್ನೆಗಳನ್ನೂ ಆಕೆ ಕೇಳುವಂತಿಲ್ಲ.

- ಸಮಾಜದಲ್ಲಿ ಹೆಣ್ಣು ಶೀಲವಂತಳಾಗಿರಬೇಕು. ಹಾಗೆಯೇ ಆಕೆಯು ಪಾತಿವ್ರತ್ಯ ಪಾಲನೆಯನ್ನು ಖಡ್ಡಾಯವಾಗಿ ಪಾಲಿಸಬೇಕು.
- ಶೀಲಗೆಟ್ಟ ಹೆಣ್ಣು ನಾಯಿಗಿಂತ ಕೀಳು. ಅಂತವಳಿಗೆ ಯಾರೂ ಸಹಾಯ ಮಾಡಬಾರದು.
- ಕೊಟ್ಟ ಹೆಣ್ಣು ಕುಲಕ್ಕೆ ಹೊರಗು. ಬಿಟ್ಟ ಹೆಣ್ಣು ಬೀದಿ ಪಾಲು.
- ನಡತೆಗೆಟ್ಟವಳಿಗೆ ನರಕವೇ ಗತಿ.

ಹೀಗೆ ಸಾವಿರಾರು ಬಗೆಯ ನಿಷೇಧಗಳನ್ನು ಹೆಣ್ಣಿನ ಸಂದರ್ಭದಲ್ಲಿ ಪಟ್ಟಿ ಮಾಡುತ್ತ ಹೋಗುಬಹುದು. ಇಂತಹ ಎಲ್ಲ ನೀತಿ ನಿಯಮ ನಿರ್ಬಂಧ ನಿಷೇಧಗಳೆಲ್ಲವೂ ಹೆಣ್ಣು ಲಿಂಗ ಸಂಬಂಧ ಹಾಗೂ ದೇಹ ಸಂಬಂಧಗಳ ಮೂಲಕವೇ ಬಂದುದನ್ನು ಇಲ್ಲಿ ವಿಶೇಷವಾಗಿ ಪ್ರಸ್ತಾಪಿಸಬೇಕಾಗಿದೆ. ನಿಷೇದ ಹೇರುವ ಪುರುಷ ಪ್ರಜ್ಞೆಯು ಹೆಣ್ಣನ್ನು ನಿಯಂತ್ರಿಸಲು ಇಂತೆಲ್ಲ ತಂತ್ರಗಳನ್ನು ರೂಪಿಸಿದೆ. ಸಾಮಾಜಿಕವಾಗಿ ಹೆಣ್ಣನ್ನು ಸೆರೆಹಿಡಿಯಲು ಇದರಿಂದ ಪುರುಷರಿಗೆ ಸುಲಭವಾಗಿದೆ. ನಿರ್ಬಂಧಿಸುವ ಮನಸ್ಸು ಯಾವ ರೀತಿಯಿಂದಲೂ ನಿಸರ್ಗ ಬದ್ಧವಾದುದಲ್ಲ. ಹೆಣ್ಣ ಮನಸ್ಸು ನಿಸರ್ಗದ ಸಂವೇದನೆಗೆ ಹೆಚ್ಚು ಸಮೀಪವಾದದ್ದು. ಆದ್ದರಿಂದಲೇ ಹೆಣ್ಣು ಸಾಮಾಜಿಕ ನಿಷೇಧಗಳನ್ನು ರೂಪಿಸಲಿಲ್ಲ. ಎಲ್ಲ ಹಿಂಸೆಯನ್ನು ಸಹಿಸಿಕೊಳ್ಳುವ ಸ್ತ್ರೀ ಸ್ವಭಾವವು ನಿರಂಕುಷವಾದುದಲ್ಲ. ಅಂಕುಷವನ್ನು ಸದಾ ಮನದಲ್ಲಿಟ್ಟುಕೊಂಡು ಅದನ್ನು ಹೆಣ್ಣ ದೇಹದ ಮೇಲೆ ಚಲಾಯಿಸುವ ಗಂಡಿನ ಮನಸ್ಸು ಸಾಮಾಜಿಕವಾಗಿ ನಿರಂಕುಶ ಪ್ರಭುತ್ವದಂತೆ ವರ್ತಿಸುತ್ತದೆ. ನಿರಂಕುಷವಾದ ಮನಸ್ಸು ಎಂತಹುವುದೇ ನ್ಯಾಯವನ್ನು ಅನ್ಯಾಯಕ್ಕೆ ಬೇಕಾದಂತೆ ತಿರುಚಬಲ್ಲದು. ಸಮಾಜದಲ್ಲಿ ಹೆಣ್ಣಿನ ಸ್ಥಾನಮಾನಗಳು ಗಂಡಸಿನ ಕೃಪೆಯಿಂದ ತೀರ್ಮಾನವಾಗುವುದು ಮಾನವೀಯತೆಯಲ್ಲಿ. ಸಮಾಜದ ಏಳಿಗೆಯಲ್ಲಿ ಹೆಣ್ಣಿಗೂ ಸ್ಥಾನವಿರಬೇಕು. ಹಾಗೆ ನೋಡಿದರೆ ಹೆಣ್ಣು ಸಮಾಜದ ಅನೇಕ ಹೊರೆಗಳನ್ನು ಹೊತ್ತಿದ್ದಾಳೆ. ಆಕೆ ಕುಟುಂಬದ ಭಾರವನ್ನೂ ನಿರ್ವಹಿಸುತ್ತಾಳೆ. 'ಧರೆಗೆ ಗಿರಿಯು ಭಾರವೆ, ಗಿರಿಗೆ ಮರವು ಭಾರವೆ, ಹೆತ್ತ ತಾಯಿಗೆ ಮಗುವು ಭಾರವೆ' ಎಂಬ ನುಡಿಗಳು ಧ್ವನಿ ಪೂರ್ಣವಾಗಿವೆ. ಇದೇ ಗಂಡಸರ ಹೊರೆಯೆ ಹೆಣ್ಣ ಮೇಲಿದೆ ಎಂಬುದು ಅತಿಶಯೋಕ್ತಿಯಂತೆ ಕಂಡರೂ ವಾಸ್ತವದಲ್ಲಿ ಹೆಣ್ಣು ಪುರುಷ ಸಮಾಜದ ಭಾರದಿಂದ ನಲುಗಿಹೋಗಿದೆ. ಹೆತ್ತು ಹೊತ್ತು ಸಾಕಿಸಲಹಿ ಯಾವ ಅಧಿಕೃತ

ಚಹರೆಯೂ ಇಲ್ಲದೆ ಕಣ್ಣು ಮುಚ್ಚುವ ಹೆಣ್ಣಿನ ಗೋಳು ಪುರುಷರ ಅಂತರಂಗಕ್ಕೆ ತಟ್ಟುವುದಿಲ್ಲ. ತಟ್ಟಿದರೂ ಕರ್ಮ ಸಿದ್ಧಾಂತದ ಉಪಾಯದಲ್ಲಿ ಪಲಾಯನ ಮಾಡುವುದು ಪುರುಷ ಮನಸ್ಸಿಗೆ ಸುಲಭ. ಉಂಡು ಎಸೆದ ಎಲೆಗೆ ಹೆಣ್ಣು ತನ್ನನ್ನು ಹೋಲಿಸಿಕೊಂಡಿರುವುದರ ಹಿಂದಿನ ದುರಂತ ಸ್ಥಿತಿಯನ್ನು ಸಾಮಾಜಿಕವಾಗಿ ಪರಿಶೀಲಿಸಬೇಕು. ಗಂಡು ಭೋಗ್ಯಕ್ಕೆ ಹೆಣ್ಣುಗಳನ್ನು ಅಪಹರಿಸುವ ಹಾಗೆಯೆ ಗೆದ್ದ ರಾಜರು ನಮ್ಮ ಹೆಣ್ಣುಗಳನ್ನು ಸುಖಕ್ಕಾಗಿ ಭೋಗಿಸುವ ಕತೆಗಳು ಚರಿತ್ರೆಯಲ್ಲಿ ಸಮೃದ್ಧವಾಗಿ ಸಿಗುತ್ತವೆ. ಗೆದ್ದ ಸೈನಿಕರು ಸೋತ ಸೈನಿಕರ ಹೆಣ್ಣು ಮಕ್ಕಳನ್ನು ಕಸಿದು ಕೊಳ್ಳುತ್ತಿದ್ದುದಕ್ಕೆ ಸಾಕ್ಷಿಗಳು ನೂರಾರು. ಚರಿತ್ರೆಯ ಯಾವ ಪುಟದಲ್ಲು ಯಾವ ರಾಜನೂ ಹೆಣ್ಣಿನ ಮೇಲಿನ ಹಲ್ಲೆಗೆ ವಿದುದ್ಧವಾಗಿ ರಾಜ್ಯನೀತಿ ರೂಪಿಸಿದ್ದು ಕಂಡು ಬರುವುದಿಲ್ಲ. ಪ್ರಾಚೀನಕಾಲದಿಂದಲೂ ಸಾಮ್ರಾಜ್ಯಗಳು ಪುರುಷರ ಹಿತ ಕಾಯ್ದಿವೆಯೆ ಹೊರತು ಅವು ಸ್ತ್ರೀ ಪರವಾಗಿ ಧ್ವನಿ ಎತ್ತಿದ್ದು ಇಲ್ಲವೇ ಇಲ್ಲ ಎಂಬಷ್ಟು ರೀತಿಯಲ್ಲಿ ಆಳಿ ಗತಿಸಿ ಹೋಗಿವೆ. ಸಾಮ್ರಾಜ್ಯಗಳು ಅಸ್ತಂಗತವಾಗಿದ್ದರೂ ಅವು ಉಳಿಸಿ ಹೋಗಿರುವ ಮೌಲ್ಯಗಳು ಮರೆಯಾಗಿಲ್ಲ. ಈಗಲೂ ರಾಜಧಿರಾಜರ ದರ್ಭಾರುಗಳು ನಾಗರೀಕತೆಯ ಹೆಸರಲ್ಲಿ ಹೆಣ್ಣಿನ ಭೋಗದಲ್ಲಿ ಮುಳುಗಿವೆ. ಸಾಮಾಜಿಕ ರಚನೆಯಲ್ಲಿ ಹೆಣ್ಣಿನ ಘನತೆಯನ್ನು ಕಿರಿದಾಗಿಸುವ ನಾಗರೀಕ ಸಂಹಿತೆಗಳು ಗುಪ್ತವಾಗಿಯೂ ಕ್ರಿಯಾಶೀಲವಾಗಿರುತ್ತವೆ. ಯಾವ ಸಮಾಜವೂ ಹೆಣ್ಣನ್ನು ಪೂರ್ಣ ಪ್ರಮಾಣದಲ್ಲಿ ಸಮಾನವಾಗಿ ಕಂಡಿಲ್ಲ. ಭಾರತೀಯ ಗ್ರಾಮ ಸಮಾಜವಂತೂ ಹೆಣ್ಣಿನ ಸ್ಥಾನ ಮಾನಗಳನ್ನು ತನ್ನ ಹಿಡಿತದಲ್ಲೆ ಇಟ್ಟುಕೊಂಡು ಈಗಲೂ ಆಕೆಯನ್ನು ಭೋಗದ ವಸ್ತುಮಾತ್ರವಾಗಿ ಲೈಂಗಿಕ ಸುಖಕೊಡುವ ಸಖಿಯಾಗಿ ಮಕ್ಕಳು ಹೆರುವ ಯಂತ್ರವಾಗಿಯೇ ಬಳಸಿಕೊಳ್ಳುತ್ತಿರುವುದನ್ನು ಬಚ್ಚಿಡಲಾಗದು.

ಸಮಾಜದ ಮೇಲು ಜಾತಿಗಳು ಕೆಳಜಾತಿ ಹೆಣ್ಣುಗಳನ್ನು ಇನ್ನೂ ಕ್ರೂರವಾಗಿ ಹಿಂಸಿಸಿವೆ. ತಮ್ಮ ಹೆಣ್ಣುಗಳ ಮಾನ ಕಾಪಾಡಿಕೊಳ್ಳುವ ಸ್ವಾರ್ಥ ಹಿತಾಶಕ್ತಿಯಲ್ಲಿ ಮೇಲು ಜಾತಿಗಳು ಕೆಳಜಾತಿ ಹೆಣ್ಣುಗಳನ್ನು ಲೈಂಗಿಕ ಶೋಷಣೆಗೆ ಬಳಸಿಕೊಂಡು ಸಾಮಾಜಿಕವಾಗಿಯೆ ದೇವದಾಸಿ ವೇಶ್ಯಾವಾಟಿಕೆಯಂತಹ ಪದ್ಧತಿಗಳನ್ನು ಉಳಿಸಿಕೊಂಡಿದೆ. ಗಂಡಸಿನ ಮನಸ್ಸು ಹೆಣ್ಣಿನ ಮನಸ್ಸನ್ನು ಅರ್ಥಮಾಡಿಕೊಳ್ಳುವಲ್ಲಿ ಯಾವತ್ತು ಹಿಂದೆ ಬಿದ್ದಿದೆ. ಆಕೆಯ ಅಪೇಕ್ಷೆಗಳನ್ನು ನೆಲಸಮಾಡಿರುವ ಪುರುಷ ಸಮಾಜವೇ ಮಾತೃತ್ವದ ಅಲಂಕಾರಿಕ ಬಿರುದನ್ನು

ಆಗಾಗ ಮೆಚ್ಚಿಸಲಿಕ್ಕಾಗಿ ಹೆಣ್ಣ ಮುಂದೆ ನಟಿಸುತ್ತಿರುತ್ತದೆ. ಹೆಣ್ಣಿನ ರಕ್ಷಣೆ ಹೊತ್ತ ನಾಟಕವಾಡುವ ಪುರುಷ ಹೆಣ್ಣನ್ನು ಅಬಲೆಯನ್ನಾಗಿಸಿ ಅವಳ ಹಕ್ಕು ಭಾದ್ಯತೆಗಳನ್ನೆಲ್ಲ ಕಸಿದು ಕೊಂಡಿದೆ. ಸಮಾಜಗಳು ಇಷ್ಟೆಲ್ಲ ಮುಂದುವರಿದಿದ್ದರೂ ಈಗಲೂ ಮಹಿಳೆಯರಿಗೆ ತಂದೆಯ ಆಸ್ತಿಯಲ್ಲಿ ಹಕ್ಕು ಜಾರಿಕೊಂಡಿಲ್ಲ. ಮೀಸಲಾತಿಯಲ್ಲೂ ಹೆಣ್ಣಿಗೆ ಸಮಾನ ಸ್ಥಾನವಿಲ್ಲ. ಎಲ್ಲ ರಾಜಕೀಯ ಪಕ್ಷಗಳೂ ಪುರುಷ ಪ್ರಧಾನ ಪಕ್ಷಗಳೇ. ಹೆಣ್ಣಿಗೆ ರಾಜಕೀಯ ಸ್ಥಾನ ಮಾನ ಕೊಡುವ ಪದ್ಧತಿ ಇದ್ದರೂ ಆಳುವ ಪಕ್ಷ ರಾಜಕಾರಣದಲ್ಲಿ ಲಿಂಗ ಭಿನ್ನತೆಯನ್ನು ಕಾಣಲಾಗದು. ಸ್ತ್ರೀಯ ಪ್ರಾತಿನಿಧ್ಯವು ರಾಜಿಕೀಯ ಕ್ಷೇತ್ರದಲ್ಲಿ ಪುರುಷ ರೂಪಕ್ಕೆ ತಕ್ಕಂತೆಯೆ ವರ್ತಿಸಬೇಕೆ ಹೊರತು ಶುದ್ದ ಸ್ತ್ರೀ ಸಂವೇದನೆಯ ರಾಜಕೀಯ ನೀತಿಯನ್ನು ಅಂತಲ್ಲಿ ನಿರೀಕ್ಷಿಸಲಾಗದು. ಅಧಿಕಾರ, ಪ್ರಭುತ್ವಗಳೆಲ್ಲ ಪುರುಷರ ಹಂಗಿನಲ್ಲೇ ಬೆಳೆದು ಬಂದಿವೆಯಾದ್ದರಿಂದ ಬದಲಾದ ಕಾಲದಲ್ಲೂ ಸಂವಿಧಾನದ ರಕ್ಷಣೆ ಇದ್ದಾಗಲೂ ಪುರುಷ ಸಮಾಜದ ಹುನ್ನಾರಗಳು ಸ್ತ್ರೀ ಸಂವೇದನೆಗೆ ತಕ್ಕ ಘನತೆ ಗೌರವ ಸಮಾನತೆಯನ್ನು ನೀಡಲು ಸಾಧ್ಯವಾಗಿಸದಂತೆ ಜಾಲ ರೂಪಿಸಿಕೊಂಡಿವೆ.

ಹೀಗಾಗಿಯೆ ಹೆಣ್ಣನ್ನು ಧರ್ಮಗಳು ಕೂಡ ಸಮಾಜದಲ್ಲಿ ಕನಿಷ್ಟವಾಗಿ ತೋರಿಸಿವೆ. ತನ್ನ ಧರ್ಮದ ಹೆಣ್ಣ ದೇಹವನ್ನು ಇನ್ನೊಂದು ಅನ್ಯ ಧರ್ಮೀಯ ಪುರುಷರು ನೋಡಬಾರದು ಎಂಬ ಸ್ವಾರ್ಥ ಗಂಡಸಿನ ಮನಸ್ಸಿಗೆ ಬಹಳ ದೊಡ್ಡ ಸಾಕ್ಷಿ. ಹೆಣ್ಣುಗಳ ಮೇಲಿನ ಒಡೆತನದ ಸ್ವಭಾವದಿಂದ ಬಂದ ನಡತೆ ಭಯಾನಕವಾಗಿದೆ. ಹೆಣ್ಣನ್ನು ಸುಂದರವಾದ ಉಡುಪುಗಳಿಂದ ಮುಚ್ಚುವುದು, ಬುರ್ಕಾ ಹಾಕಿ ಬಂಧಿಸುವುದು, ಒಡವೆಗಳಿಂದ ಅಲಂಕರಿಸಿ ಅದರಿಂದಲೆ ಮಾರೆಮಾಚಿಸುವುದೆಲ್ಲವೂ ಸಾಮಾಜಿಕವಾಗಿ ಹೆಣ್ಣಿನ ದೇಹವನ್ನು ಬಚ್ಚಿಟ್ಟು ಆಕೆಗೆ ಸಾರ್ವಜನಿಕ ವ್ಯಕ್ತಿತ್ವವೇ ಇಲ್ಲದಂತೆ ಮಾಡುವ ಹುನ್ನಾರ ಇಂತಹ ಕ್ರಮುಗಳಲ್ಲಿರುತ್ತದೆ. ವಿಧವೆಯಾದ ಹೆಂಗಸು ಕತ್ತಲೆ ಮೂಲೆಯಲ್ಲಿ ಬಿದ್ದಿರಬೇಕು. ಎಂಬುದು ಕೂಡ ಪುರುಷನ ವಿಕೃತ ನಿಯಮವೇ ಆಗಿದೆ. ಹೆಣ್ಣು ಮೈತುಂಬ ಸೆರಗು ಹಾಕಿ ತಲೆ ಮೆಲೂ ಸೆರಗು ಹಾಕಿಕೊಂಡು ಹೋಗಬೇಕು ಎಂಬ ಪುರುಷನ ಮನಸ್ಸಿನಲ್ಲಿ ಹೆಣ್ಣಿನ ಮಾನ ರಕ್ಷಣೆಯ ಉದ್ದೇಶಕ್ಕಿಂತ ಆಕೆಯ ದೇಹವನ್ನು ಮತ್ಯಾರೂ ನೋಡಬಾರದು ಎಂಬುದೆ ಮುಖ್ಯವಾಗಿದೆ. ಸ್ವತಃ ತನ್ನ ಮಕ್ಕಳ ಜೊತೆ ಕೂಡ ತಾಯಾದವಳು ಮುಕ್ತವಾಗಿ ಮಾತನಾಡಿ ಅವರ ಜೊತೆ ಏಕಾಂತವಾಗಿ ಕೂತು ಮಾತನಾಡಿಸಲು ಅವಕಾಶವನ್ನು ಪುರುಷ ಸಮಾಜ ಕೊಡುವುದಿಲ್ಲ. ಮನು ಎಂಬ ಭೂಪ ಸ್ವತಃ ತಾಯಿ ಮಗ ಒಂದು ಕೊಠಡಿಯಲ್ಲಿ ಏಕಾಂತದಲ್ಲಿರುವುದು

ಸರಿಯಲ್ಲ. ಹಾಗೆ ಒಂದೆಡೆ ಸೇರಿದರೆ ಅವರಿಬ್ಬರೂ ಕೂಡುವರು ಎಂಬ 'ಅಪಾಯ'ವನ್ನು ಹೇಳುತ್ತಾನೆ. ನಿಜವಿರಬಹುದು! ಪುರುಷ ರೂಪಿಯಾದ ಮಗ ಹೆತ್ತವಳನ್ನೆ ಮುಟ್ಟಿಬಿಡಬಹುದು ಎಂಬ ಮನುವಿನ ಆತಂಕ ನಿಜವೇ ಆಗಿಬಿಡಬಹುದು. ಇದು ತಾಯ ಭಯವಲ್ಲ. ಹೆಣ್ಣಿನ ಆತಂಕವಲ್ಲ. ಗಂಡಿನ ಭಯ. ಯಾಕೆಂದರೆ ಗಂಡು ಹೆಣ್ಣ ಮೇಲೆ ಸರ್ವಾಧಿಕಾರ ಸ್ಥಾಪಿಸಬಲ್ಲ. ಅಂತೆಯೆ ಮೃಗೀಯ ಕಾಮನೆಯ ಕ್ಷಣದಲ್ಲಿ ಆತ ಏನನ್ನಾದರೂ ಮಾಡಿ ಬಿಡಬಲ್ಲ. ಗ್ರೀಕ್‌ನ ಪುರಾಣ ವೀರ ಈಡಿಪಸ್ಸನ್ ಪಾಪವನ್ನು ಕೂಡ ಪುರುಷ ತನಗೆ ಬೇಕಾದಂತೆ ಬಳಸಿಕೊಂಡು ಇದು ದೈವದ ಹುನ್ನಾರ. ಮಗನ ಕೈಯಿಂದ ವಿಧಿ ಹೀಗೆ ಅಪರಾಧ ಮಾಡಿಸಿತು ಎಂದು ಹೇಳಿ ಪಾಪಪ್ರಜ್ಞೆಯಲ್ಲಿ ಮುಳುಗಿ ಪರಿಶುದ್ಧವಾಗಿ ಬಿಡುತ್ತದೆ. ಆದರೆ ಅಂತಹ ಪುರಾಣದ ಹಿಂದೆ ಕಣ್ಣಿಗೆ ಕಾಣದೆ ಹೋದ ಹೆಣ್ಣಿನ ಮನಸ್ಸನ್ನು ಸ್ವತಃ ಸಿಗ್ಮಂಡ್ ಫ್ರಾಯ್ಡ್ ಗ್ರಹಿಸಲಿಲ್ಲ ಎಂದರೆ ಭಾಗಶಃ ಹೆಣ್ಣಿನ ಮನವ ಅಳೆಯಲು ತಿಳಿಯಲು ಪುರುಷರಿಗೆ ಸಾಧ್ಯವೇ ಇಲ್ಲ. ಆದ್ದರಿಂದಲೆ ಆತ ಹೆಣ್ಣಿನ ಮನಸ್ಸನ್ನು ಯಾರಿಂದಲೂ ಹುಡುಕಲು ಸಾಧ್ಯವಿಲ್ಲ. ಆಕೆ ಅಷ್ಟೊಂದು ನಿಗೂಢಳು ಎಂದು ನಕಾರಾತ್ಮಕ ಅರ್ಥವನ್ನು ಬಿಂಬಿಸಿರುವುದು. ಎಲ್ಲ ಪುರುಷರು ನೀಚರಲ್ಲದಿದ್ದರೂ ಪುರುಷ ಎಂಬ ವ್ಯವಸ್ಥೆ ಅತ್ಯಂತ ಅಪಾಯಕಾರಿಯಾದುದು. ಪುರುಷರು ಎಂದಾಗಲೆಲ್ಲ ಇಡೀ ಪುರುಷ ಸಮುದಾಯವೇ ಪೂರ್ವಾಗ್ರಹವಾಗಿದೆಯೆಂದಲ್ಲ. ಪುರುಷ ಎನ್ನುವದು ಸ್ತ್ರೀ ಸಂವೇದನೆಯನ್ನು ಹತ್ತಿಕ್ಕುವ ಒಂದು ನಿರಂಕುಷ ಸ್ಥಿತಿ. ಈ ನಿರಂಕುಷತೆಯು ಅನೇಕ ಸ್ತರಗಳಲ್ಲಿ ಹೆಣ್ಣಿನ ಸಾಮಾಜಿಕ ಸ್ಥಿತಿಯನ್ನು ನಿರ್ಧರಿಸಿದೆ. ಹೀಗಾಗಿ ಪುರುಷ ಮನಸ್ಸಿನ ಹಿನ್ನಲೆಗಳನ್ನು ತಿಳಿಯಬೇಕಾಗಿದೆ.

ಹೆಣ್ಣಿಗಾಗಿ ಮಹಾ ಯುದ್ಧಗಳೆನ್ನೆ ಮಾಡಿರುವ ಪುರುಷ ಸಾಮ್ರಾಜ್ಯಗಳು ಹೆಣ್ಣಿನ ಮೇಲೆ ಸರ್ವಾಧಿಕಾರ ಚಲಾಯಿಸಿದೆ. ಸಮಾಜದಲ್ಲಿ ಅವಳನ್ನು ಯಾರು ಬೇಕಾದರೂ ಹೆದರಿಸಬಲ್ಲರು. ಒಂದೇ ಒಂದು ಸಣ್ಣ ಮಾತುಕೂಡ ನೋಟ ಕೂಡ ಹೆಣ್ಣಿನ ಮನಸ್ಸನ್ನು ಹಿಂಸಿಸಬಲ್ಲವು. ರಾಮಾಯಣ ಮಹಾಭಾರತಗಳು ಹೆಣ್ಣಿನ ಕಾರಣಕ್ಕೆ ಯುದ್ಧ ಮಾಡುತ್ತವೆ. ಶ್ರೀಕೃಷ್ಣ ದ್ರೌಪದಿಯ ಮಾನ ಕಾಪಾಡಿದ ಎಂದು ಅಪರೂಪಕ್ಕೆ ಒಂದು ಸಂದರ್ಭ ಒದಗಿ ಬರುವುದಾದರೂ ಅದೇ ಶ್ರೀಕೃಷ್ಣನ ರಾಸಲೀಲೆಗಳು ನೈತಿಕವಾದವಲ್ಲ ಹಾಗೂ ಹೆಣ್ಣಿನ ಮಾನವನ್ನು ಉಳಿಸುವಂತವಲ್ಲ ಎಂಬುದನ್ನು ಮರೆಯಲಾಗದು. ಹೆಣ್ಣಿನ ಮಾನ ಕಾಪಾಡುವ ಜವಾಬ್ದಾರಿ ಗಂಡಿಗಿರುವುದು ನಿಜದಿದ್ದರೂ ಆತ ತನ್ನ ಹೆಣ್ಣಿನ ಮಾನ

ಕಾಪಾಡಿದರೂ ಪರನಾರಿಯರ ಮಾನವನ್ನು ಕಾಪಾಡುತ್ತಾನೆ ಎಂದು ನಂಬಲಿಕ್ಕಾಗದು. ಸಾಮಾಜಿಕವಾಗಿ ನಿತ್ಯವೂ ಹೆಣ್ಣಿನ ಮೇಲೆ ದೌರ್ಜನ್ಯಗಳು ಘಟಿಸುತ್ತಲೇ ಇದ್ದರೂ ಪುರುಷ ಸಮಾಜ ತಲೆತಗ್ಗಿಸುವುದಿಲ್ಲ. ಅಪರಾಧಿಗಳಿಗೆ ಶಿಕ್ಷೆ ಆಗುವುದೇ ಇಲ್ಲ. ನ್ಯಾಯ ದೇವತೆ ಎಂಬ ಸಂಕೇತ ಕೂಡ ಅಪಮೌಲ್ಯಗೊಂಡಿದೆ ನ್ಯಾಯ ದೇವತೆಯನ್ನು ನಿರ್ದೇಶಿಸುವವರು ಪುರುಷರೇ ತಾನೆ. ನ್ಯಾಯದ ಪರಮ ವಕಾಲತ್ತುಗಳೆಲ್ಲ ಗಂಡಿನ ಪರವಾಗಿಯೆ ಇರುತ್ತವೆ.

ಹೆಣ್ಣಿನ ದೇಹದ ಬಗ್ಗೆ ಯಾಕೆ ಪುರುಷ ಇಷ್ಟೊಂದು ಕವಚಗಳನ್ನು ನಿರ್ಮಿಸಿದ ಎಂಬುದು ಸಂಕೀರ್ಣವಾಗಿದೆ. ಸಖನಾದವನು, ನಲ್ಲನಾದವನು, ಅಮರ ಪ್ರೇಮಿಯಾದವನು, ಅಂತರಂಗದ ಪ್ರಾಣಪುರುಷನಾದವನು,ನಿತ್ಯ ನಿರಂತರ ನೆರಳಾಗಿ ಬಂದವನು, ಯಾವತ್ತೂ ತನ್ನ ಪ್ರಾಣದಲ್ಲೇ ಹೆಣ್ಣನ್ನು ಲೀನವಾಗಿಸಿಕೊಳ್ಳುವ ಕನಸು ಕಂಡವನು ಏಕೆ ಬರ್ಬರ ಮನಸ್ಸನ್ನು ಈಗಲೂ ಹೆಣ್ಣಿನ ಮೇಲೆ ಚಲಾಯಿಸುತ್ತಾನೆ? ಇಷ್ಟೊಂದು ಸ್ವಾರ್ಥದಿಂದ ಹೆಣ್ಣನ್ನು ತನ್ನ ನಿಯಂತ್ರಣದಲ್ಲೆ ಇಟ್ಟುಕೊಳ್ಳುತ್ತಾನೆ? ಎಂಬುದರ ಮಾನಸಿಕ ಸ್ಥಿತಿಯನ್ನು ಬಿಡಿಸಿ ತಿಳಿದರೆ ಅದು ಹೆಣ್ಣು ಗಂಡಿನ ಎರಡೂ ಭವಿಷ್ಯಕ್ಕೆ ಒಳಿತಾಗುತ್ತದೆ. ಸಮಾಜದಲ್ಲಿ ಹೆಣ್ಣನ್ನು ಸದಾ ಅನುಮಾನದಿಂದ ನೋಡುವಂತೆ ಮಾಡಿರುವುದಕ್ಕೆ ಹೆಚ್ಚು ಪುರುಷನೇ ಹೊಣೆಗಾರ. ಹೆಣ್ಣಿನ ಬಗ್ಗೆ ಪೂರ್ವಾಗ್ರಹವನ್ನು ಬಿತ್ತಲು ಒಳ್ಳೆಯ ವೇದಿಕೆ ಎಂದರೆ ಶೀಲ ಪ್ರಜ್ಞೆ. ಶೀಲದ ಹೆಸರನ್ನು ಗಂಡಸು ಸದಾ ಹೇರಿರುವುದರಿಂದ ಆಕೆ ಸಮಾಜದಲಿ 'ಮಾನ ಮರ್ಯಾದೆ' ಎಂಬ ಕೋಟೆಯ ಒಳಗೇ ಬದುಕಬೇಕಾಗಿದೆ.

ಪ್ರಧಾನವಾಗಿ ಹೆಣ್ಣದೇಹದ ಮೇಲಿನ ನಿಷೇದಗಳನ್ನು ಈ ಕೆಳಗಿನಂತೆ ವಿಂಗಡಿಸಬಹುದು. ಈ ವಿಂಗಡನೆಯಲ್ಲಿ ಪುರುಷ ಸಮಾಜದ ಮಾನಸಿಕ ತಾತ್ವಿಕ ನಡೆಯನ್ನು ಗಮನದಲ್ಲಿಟ್ಟು ಕೊಳ್ಳಲಾಗಿದೆ.

೧ ದೈಹಿಕ ನಿಷೇಧಗಳು. ೨ ಮಾನಸಿಕ ನಿಷೇಧಗಳು

೩ ಕೌಟುಂಬಿಕ ನಿಷೇಧಗಳು ೪ ಸಾಮಾಜಿಕ ನಿಷೇಧಗಳು

೫ ಆರ್ಥಿಕ ನಿಷೇಧಗಳು ೬ ಧಾರ್ಮಿಕ ನಿಷೇಧಗಳು

ಇಂತಹ ನಿಷೇಧಗಳ ಒಂದೊಂದು ಗುಂಪಿನಲ್ಲೂ ಹಲಬಗೆಯ ನಿಷೇಧಗಳ ಗುಂಪನ್ನು ಮಾಡಬಹುದು. ದೈಹಿಕವಾದ ನಿಷೇಧಗಳು ಲಿಂಗ ಸಂಬಂಧವನ್ನು ನಿರ್ಧರಿಸುತ್ತವೆ. ಹೆಣ್ಣು ಯಾರ ಯಾರ ಜೊತೆ ಸಂಬಂಧಿತಗಳು,

ಆಕೆಯ ಸಂಪರ್ಕ ಹೇಗೆ ಎಂಬುದನ್ನು ಹೇಳಲು ಸಾವಿರಾರು ಬಗೆಯ ದೈಹಿಕ ನಿಷೇದಗಳನ್ನು ಪಟ್ಟಿ ಮಾಡಬಹುದು. ಹೆಣ್ಣಿನ ದೇಹವೇ ಮೋಹಕೂಪ. ಪಾಪ ಕೂಪ. ಹೊಲಸಿನ ಗುಂಡಿ ಎಂದು ಪುರಾಣಗಳು ಹೇಳಿ ಆಕೆಯ ಸಹವಾಸವನ್ನು ಬಿಟ್ಟು ಮುಕ್ತಿ ಕಡೆ ಪುರುಷ ನಡೆಯಬೇಕು ಎಂಬಲ್ಲಿಯವರೆಗೆ ದೈಹಿಕ ನಿಷೇಧಗಳ ವ್ಯಾಪ್ತಿ ಚದುರುತ್ತದೆ. ಮುಟ್ಟಾದ ಹೆಣ್ಣಿನ ದೈಹಿಕ ಕ್ರಮವನ್ನೆ ತೀರ ಅಸ್ಪಷ್ಟವಾಗಿ ಗಂಡಸು ಕಾಣುವುದಿದೆ. ಮುಟ್ಟಾದ ಹೆಂಗಸರನ್ನು ಹೊರಗೆ ಕೂರಿಸುವ ರೂಢಿ ಈಗಲೂ ಗ್ರಾಮಾಂತರ ಭಾರತದಲ್ಲಿ ಉಳಿದುಕೊಂಡಿದೆ. ಹೆರಿಗೆಯಾದ ತಾಯನ್ನೆ ಸೂತಕದಿಂದ ಹೊರಗುಳಿಸುವ ಪುರುಷ ಧರ್ಮದ ಆಚಾರಗಳು ಹೆಣ್ಣಿನ ಮೇಲೆ ನಿರಂತರವಾಗಿ ಶ್ರೇಷ್ಠತೆಯ ಗರ್ವದಲ್ಲಿ ಧೂರ್ತ ನಿಷೇದಗಳನ್ನು ಜಾರಿಗೊಳಿಸಿದೆ. ಮಾನಸಿಕ ನಿಷೇದಗಳು ಇನ್ನೂ ಕ್ರೂರವಾಗಿವೆ. ಹೆಣ್ಣಿನ ಮನಸ್ಸನ್ನೂ ಧ್ವಂಸ ಮಾಡುವಂತೆ ಮಾನಸಿಕ ಹಲ್ಲೆಯನ್ನು ಮಾಡುವುದು ಮಾನಸಿಕ ನಿಷೇದಗಳಿಗೆ ದಾರಿ ಮಾಡಿದೆ. ಹೆಣ್ಣ ಕಲ್ಪನೆಯಲ್ಲೂ ಪರ ಪುರುಷನನ್ನು ಕಲ್ಪಿಸಬಾರದು ದ್ರೌಪದಿಯು ಒಮ್ಮೆ ಕಲ್ಪನೆಯಲ್ಲಿ ಕರ್ಣನನ್ನು ನೆನೆದು ಆತನೂ ಪಾಂಡವರ ಜೊತೆಯಲ್ಲೆ ಬದುಕಿದ್ದರೆ ಆತನೆ ತನಗೆ ಮೊದಲ ಗಂಡನಾಗುತ್ತಿದ್ದ ಎಂದು ಯೋಚಿಸುತ್ತಿದ್ದಂತೆಯೆ ತಪಸ್ಸಿನ ಶಕ್ತಿಯಿಂದ ಮೇಲೇರುತ್ತಿದ್ದ ಜಂಬು ನೇರಳೆ ಹಣ್ಣು ಬಿದ್ದು ಅಪವಿತ್ರವಾಯಿತಂತೆ. ಇಂತಹ ಕತೆಗಳಿಗೆ ಲೆಕ್ಕವಿಲ್ಲ ಮಾನಸಿಕವಾದ ಹಿಂಸೆಗಳು ಇಡೀ ಆಕೆಯ ವ್ಯಕ್ತಿತ್ವವನ್ನು ನಾಶಪಡಿಸಬಲ್ಲವು.

ಕಲ್ಪನೆಗೂ ಸ್ವಾತಂತ್ರ್ಯವಿಲ್ಲ. ಯೋಚಿಸುವುದಕ್ಕೂ ಅವಕಾಶವಿಲ್ಲ. ಇನ್ನು ಮನದಾಸೆಯನ್ನು ಹೇಳಿಕೊಳ್ಳುವಂತೆಯೂ ಇಲ್ಲ. ಆಕೆಯ ಮನಸ್ಸಿನಲ್ಲಿ ಯಾವ ಪ್ರಶ್ನೆಗಳೂ ಇರಬಾರದು. ಅವಳು ಪರಿಶುದ್ಧವಾಗಿ ಗಂಡನ ಸಂಸಾರದಲ್ಲಿ ಮಗ್ನಳಾಗಿರಬೇಕು. ಹೊರಗಿನ ಲೋಕವನ್ನು ಮನಸ್ಸಿಗೆ ತಂದುಕೊಳ್ಳಬಾರದು. ಆಕೆಯ ಮನಸ್ಸಿನಲ್ಲಿ ಕೇವಲ ಗಂಡ ಮಕ್ಕಳು ತುಂಬಿರಬೇಕು. ಭಕ್ತಿ ಶ್ರದ್ಧೆಯಿಂದ ದೇವರ ಸ್ಮರಣೆ ಮಾಡಬೇಕು. ದೈಹಿಕವಾದ ಯಾವ ವಾಂಛೆಗಳಿಗೂ ತಲೆಕೊಡಬಾರದು. ಹೀಗೆ ಆಕೆ ತನ್ನ ಮನಸ್ಸಿನ ಎಲ್ಲ ಬಾಗಿಲುಗಳನ್ನು ಮುಚ್ಚಿಕೊಳ್ಳಬೇಕು. ಆಗಲೆ ಅವಳಿಗೆ ಮುಕ್ತಿ ಅವಳ ಇಂತಹ ಮನಸಾಕ್ಷಿಯೆ ಅವಳಿಗೆ ಸ್ವರ್ಗವನ್ನು ತೋರುವುದು ಎಂದು ಹೇಳುವಲ್ಲಿ ಮನುಸ್ಮೃತಿಯ ಪ್ರಭಾವ ದಟ್ಟವಾಗಿದೆ. ಕೌಟುಂಬಿಕ ನಿಷೇಧಗಳಂತು ಹೆಜ್ಜೆ ಹೆಜ್ಜೆಗೂ ಹೆಣ್ಣನ್ನು ನಿಯಂತ್ರಿಸಿ ಆಕೆ ಸಂಸಾರದಲ್ಲಿ ಹೇಗೆ ನಡೆದುಕೊಳ್ಳಬೇಕು ಎಂಬುದಕ್ಕೆ ವಿಧಿ ನಿಯಮಗಳನ್ನು ರೂಪಿಸಿದೆ. ಮನು ಧರ್ಮ ಶಾಸ್ತ್ರದ ಎಲ್ಲಾ ನಿಯಮಗಳು

ಕೌಟುಂಬಿಕ ನಿಷೇದಗಳ ವ್ಯಾಪ್ತಿಗೆ ಬರುತ್ತವೆ. ಸಂಸಾರದಲ್ಲಿ ಹೆಣ್ಣು ಹೀಗೆ ನಡೆದುಕೊಳ್ಳಬೇಕು ಎಂಬ ನಿರ್ಭಂಧಗಳು ಆಕೆಯನ್ನು ಮಾನಸಿಕವಾಗಿ ತೀವ್ರವಾಗಿ ಹಿಂಸಿಸಿವೆ. ಆದರಿಂದಾಗಿಯೇ ಹೆಣ್ಣು ಮಕ್ಕಳು ಜನಪದ ಸಾಹಿತ್ಯಗಳಲ್ಲಿ ತವರು ಮನೆಯನ್ನು ಆತ್ಯಂತಿಕವಾಗಿ ನೆನಪಿಸಿಕೊಳ್ಳುವುದು. ಗಂಡನ ಮನೆಯ ಚಿತ್ರಣವನ್ನು ಅದರ ಪರಮ ಹಿಂಸೆಯ ಮೂಲಕ ಹೆಣ್ಣೊಬ್ಬಳು ಹೀಗೆ ಹೇಳುವುದಿದೆ. ಗಂಡನ ಮನೆ ಎಂಬುದು 'ಮರಳಾಗೆ ನಡೆದ್ದಾಂಗೆ, ಮೊಳಕೈಗೆ ಚಿಲಕಾವ ಬಡಿದ್ದಾಂಗೆ' ಈ ಮೂರ್ತಿ ಹಿಂದಿನ ಮೌನ ಚೀತ್ಕಾರ ಗಂಡಸರ ಕಿವಿಗೆ ಕೇಳಿಸಲಾಗದು. ಸಂಸಾರದಲ್ಲಿ ಹೆಣ್ಣ ಹೆರುವ ಪೊರೆವ ಸಲಹಿ ಬೆಳೆಸುವ ಪ್ರಾಣಿಯೆ ಆಗಿದ್ದರೆ ಮಾತ್ರ ಆಕೆ ಸತಿ ಸಾವಿತ್ರಿಯಂತವಳು. ಆಕೆ ಮಾತ್ರ ಮುಕ್ತಿಗೆ ಯೋಗ್ಯಳು. ಅಂತಹ ನಿಯಮ ಪಾಲಿಸದಿದ್ದರೆ ಅಂತವಳು ರೌರವ ನರಕಕ್ಕೆ ಹೋಗುವರು ಎಂದು ಭೀತಿಯನ್ನು ಹಿಂದೂ ಪುರುಷ ಧರ್ಮ ಹೇಳುತ್ತದೆ. ಪಿತೃ ಪ್ರಧಾನ ಕುಟುಂಬದ ಲಿಂಗ ಸಂಬಂಧಿ ನಿಷೇಧಗಳು ಆಕೆಯ ಮೇಲಿನ ದಿಗ್ವಿಜಯದ ಪ್ರತೀಕವಾಗಿವೆ.

ಇನ್ನು ಸಾಮಾಜಿಕ ನಿಷೇಧಗಳು ಹಗಲಿನಷ್ಟೆ ನಿಚ್ಚಳವಾಗಿವೆ. ಸಮಾಜದಲ್ಲಿ ಆಕೆಗಿರುವ ಸ್ಥಾನವನ್ನು ಆ ನಿಷೇದಗಳೇ ಸೂಚಿಸುತ್ತವೆ. ಈ ಅಧ್ಯಾಯದ ಉದ್ದಕ್ಕೂ ಪುರುಷ ಸಮಾಜದ ನಡವಳಿಕೆ ಹೇಗೆ ಹೆಣ್ಣಿನ ಮೇಲೆ ವಿಧಿ ನಿಯಮ ನಿಷೇಧಗಳನ್ನು ರೂಪಿಸಿದೆ ಎಂಬುದನ್ನು ಚರ್ಚಸಿದೆ. ಸಮಾಜದಲ್ಲಿ ಹೆಣ್ಣಿನ ಸ್ಥಾನ ತುಂಬ ಉಪೇಕ್ಷೆಗೆ ಒಳಗಾದುದಾಗಿದೆ. ಹೆಣ್ಣನ್ನು ಸಾರ್ವಜನಿಕವಾಗಿ ತಳಿಸುವ ಬೆತ್ತಲೆಗೊಳಿಸುವ, ನಡು ಬೀದಿಯಲ್ಲೆ ಹಲ್ಲೆ ಮಾಡಿ ಅಪಮಾನ ಮಾಡುವ ಪೈಶಾಚಿಕ ಪುರುಷ ಸಮಾಜದ ನಿಷೇಧಗಳ ನರಕಕ್ಕೂ ಮೀರಿದ ಹಿಂಸೆಯುವು.

ಆರ್ಥಿಕ ನಿಷೇಧಗಳು ಸಾಮಾಜಿಕ ನಿಷೇಧಗಳ ಭಾಗವಾಗಿವೆ. ಹೆಣ್ಣಿನ ಉತ್ಪಾದನಾ ಶಕ್ತಿಯನ್ನೆ ನಿರಾಕರಿಸಿದ ಸಾಮಾಜಿಕ ವ್ಯವಸ್ಥೆಯು ಆಕೆಯನ್ನು ಬಿಟ್ಟಿ ಕೂಲಿಗೂ ಕಡೆಯಾಗಿ ದುಡಿಸಿಕೊಂಡಿದೆ. ಸ್ತ್ರೀ ಶ್ರಮ , ಶಕ್ತಿ, ಜ್ಞಾನ ಗಳೆಲ್ಲವೂ ದುರ್ಬಳಕೆಯಾಗಿವೆ. ಆರ್ಥಿಕ ಅಧಿಕಾರದಲ್ಲಿ ಸಂಪತ್ತಿನ ಪಾಲಿನಲ್ಲಿ ಹೆಣ್ಣಿನ ಮೇಲೆ ನಿಷೇಧಗಳು ಇದ್ದಿದ್ದರಿಂದಲೆ ನಮ್ಮ ನಾಡಿನ ಪ್ರಗತಿ ಹಿಂದೆ ಬಿದ್ದುದು. ಇದನ್ನು ಖ್ಯಾತ ಅರ್ಥ ಶಾಸ್ತ್ರ ಚಿಂತಕ ಅಮಾರ್ತ್ಯಸೇನ್ ತುಂಬ ಮಾರ್ಮಿಕವಾಗಿ ಪ್ರತಿ ಪಾದಿಸಿದ್ದಾರೆ. ಇನ್ನು ಧಾರ್ಮಿಕ ನಿಷೇಧಗಳಂತು ಉಗ್ರವಾಗಿವೆ. ಹೆಣ್ಣ ದೇಹದ ಮೇಲಿನ ಧಾರ್ಮಿಕ ನಿರ್ಭಂಧ ಅಧ್ಯಾಯದಲ್ಲಿ ಆ ಅಂಶಗಳನ್ನು ವಿವರವಾಗಿ ಚರ್ಚಸಲಾಗಿದೆ. ಧರ್ಮ, ಜಾತಿಗಳೆರಡರ ಹಿಂಸೆಯಲ್ಲಿ ನರಳಿದ ಕೆಳಜಾತಿಗಳ ಮೇಲಿನ ನಿಷೇಧಗಳು ಈಗಲೂ ರೂಢಿಯಲ್ಲಿವೆ. ನಿಷೇಧವನ್ನೆ

ಉಸಿರಾಟವನ್ನಾಗಿ ಮಾಡಿಕೊಂಡಂತಹ ಪುರೋಹಿತ ಶಾಹಿ ಮನಸ್ಸು ಅನೇಕ ರೀತಿಯಲ್ಲಿ ಕ್ರಿಯಾಶೀಲವಾಗಿರುವುದನ್ನು ಉಪೇಕ್ಷಿಸಲಾಗದು. ಹಿಂದೂ ಸ್ತ್ರೀಯರ ರಕ್ಷಣೆಯ ಜವಾಬ್ದಾರಿ ಹೊತ್ತಂತೆ ಮರೆವ ಅನೇಕ ಮತೀಯರು ಅದೇ ವೇಳೆಗೆ ಮತೀಯ ಗಲಭೆಗಳಲ್ಲಿ ಮತ್ತೊಂದು ಕೋಮಿನ ಹೆಣ್ಣು ಮಕ್ಕಳನ್ನು ಹೇಗೆ ನಡೆಸಿಕೊಂಡು ನರಮೇಧ ಸೃಷ್ಟಿಸುತ್ತಾರೆ ಎಂಬುದನ್ನು ಗಮನಿಸಿದರೆ ಗಂಡಸಿನ ಮನದಾಳದ ನಿಷೇಧಗಳು ಭಯೋತ್ಪಾದಕರ ಕೃತ್ಯಕ್ಕೆ ಸಮನೆನಿಸುತ್ತವೆ. ನಿಷೇಧಗಳನ್ನು ನಿರ್ನಾಮ ಮಾಡುವುದು ಸಾಧ್ಯವಿಲ್ಲದಿದ್ದರೂ ಅವುಗಳನ್ನು ಬದಲಿಸಿ ಆ ನಿಷೇದಗಳಿಗೆ ಮಾನವೀಯ ಸ್ಪರ್ಷವನ್ನು ಮಾಡಬೇಕಾದುದಿದೆ. ಈ ಬಗೆಯ ನಿಷೇಧಗಳು ಹೆಣ್ಣಿನ ಆಲೋಚನಾ ಕ್ರಮದಲ್ಲಿ ದಾಳಿ ಮಾಡಿ ಆಕೆಯನ್ನು ವಂಚಿಸಿವೆ. ಅಷ್ಟೇ ಅಲ್ಲದೆ ಅವಳ ಅಂತರಂಗವೆಲ್ಲ  ಕತ್ತಲೇ ತುಂಬಿರುವಂತೆ ಮಾಡಿದೆ. ಹೀಗೆ ಮಾಡಿದ್ದರಿಂದ ಸಾಮಾಜಿಕ ರಚನೆಯಲ್ಲಿ ಹೆಣ್ಣಿನ ಸ್ಥಿತಿಯ ಮೇಲಾದ ಪರಿಣಾಮಗಳನ್ನು ಕೆಳಗಿನಂತೆ ಪಟ್ಟಿಮಾಡಬಹುದು.

- ಹೆಣ್ಣು ಸಾಮಾಜಿಕ ವ್ಯವಸ್ಥೆಯಲ್ಲಿ ಮುಖ್ಯ ಜವಾಬ್ದಾರಿಯನ್ನು ನಿರ್ವಹಿಸಲು ಅವಕಾಶವಿಲ್ಲವಾಯಿತು.
- ಹೆಣ್ಣು ಸಮಾಜದ ಕಣ್ಣಲ್ಲಿ ಕನಿಷ್ಟಳೆನಿಸಿ ಆಕೆ ಕುಟುಂಬ ಎಂಬ ಸೆರೆಯಲ್ಲಿ ಬಂಧಿಯಾಗುವಂತಾಯಿತು.
- ಹೆಣ್ಣು ಗೌರವ ಘನತೆಗೆ ಪಾತ್ರಳಲ್ಲ ಎಂಬ ಭಾವನೆ ಸಮಾಜದಲ್ಲಿ ಬೇರೂರಿತು.
- ಹೆಣ್ಣು ಮಕ್ಕಳನ್ನು ಹಡೆಯುವುದು ಪಾಪವೆನಿಸಿತು.
- ಹೆಣ್ಣಿನ ಮೇಲೆ ಯಾರು ಬೇಕಾದರೂ ಸಾಮಾಜಿಕವಾಗಿ ಹರಿಹಾಯುವಂತಾಯಿತು.
- ಹೆಣ್ಣಿನ ಹಕ್ಕುಗಳನ್ನು ಪುರುಷರು ಕಸಿದು ಕೊಂಡು ಸಮಾಜದಲ್ಲಿ ಆಕೆಗೆ ದಾಸಿ, ಸೇವಕಿ, ಗುಲಾಮಳು ಎಂಬ ಪದವಿಗೆ ಒಳಪಡಿಸುವಂತಾಯಿತು.
- ಸಾಮಾಜಿಕ ಮೌಲ್ಯಗಳು ಪುರುಷ ಪಕ್ಷಪಾತಿಯಾಗಿ ಸ್ತ್ರೀ ವಿರುದ್ಧವಾದ ನೀತಿ ನಿರ್ದೇಶನ ನಿಷೇಧಗಳನ್ನು ಜಾರಿಗೊಳಿಸುವಂತಾಯಿತು.
- ಲೈಂಗಿಕವಾಗಿ ಸಮಾಜವು ಹೆಣ್ಣನ್ನು ಶೋಷಿಸಲು ದಾರಿಯಾಯಿತು.

- ಹೆಣ್ಣಿನ ಸಾಂಸ್ಕೃತಿಕ ನಂಬಿಕೆಗಳನ್ನು ನಾಶಪಡಿಸಿ ಆಕೆ ಧರ್ಮದ ಉರುಳಿಗೆ ಕೊರಳು ನೀಡುವಂತಾಯಿತು.

- ಹೆಣ್ಣು ಮಕ್ಕಳಿಗೆ ಆರ್ಥಿಕವಾದ ಹಕ್ಕುಗಳನ್ನು ಕಸಿದುಕೊಂಡು ಅವರು ಸಂಪತ್ತಿನ ಯಾವ ಅಧಿಕಾರವನ್ನು ಪಡೆಯುವಂತಿಲ್ಲ ಎಂಬ ಅಲಿಖಿತ ಶಾಸನವು ಬೇರೂರುವಂತಾಯಿತು.

- ಲಿಂಗ ತಾರತಮ್ಯಗಳು ಸಾಮಾಜಿಕವಾಗಿ ಸ್ಥಾಪನೆಗೊಂಡು ಹೆಣ್ಣಿನ ಭಾವನಾತ್ಮಕ ಸಂಬಂಧಗಳು ಕ್ಷೀಣಗೊಂಡವು.

- ಮಹಿಳೆಯರ ಮೌಖಿಕ ಪರಂಪರೆಯು ಸಮಾಜದಲ್ಲಿ ಮಹತ್ವ ಕಳೆದುಕೊಂಡು ಅವರ ಸಾಹಿತ್ಯ ಸೃಷ್ಠಿಯು ಮುರುಟಿತು.

- ಸ್ತ್ರೀ ಸಂವೇದನೆಯ ಭಾಷೆಯು ಪುರುಷಾಧಿಪತ್ಯದ ಕಾರಣದಿಂದಾಗಿ ಅಸ್ತಿತ್ವ ಕಳೆದುಕೊಂಡು ಪುರುಷ ಸಮಾಜದ ನುಡಿಗಟ್ಟಿಗೇ ತನ್ನ ನುಡಿಯನ್ನು ರೂಪಿಸಿಕೊಳ್ಳಬೇಕಾದ ಅಪಾಯ ಉಂಟಾಯಿತು.

- ಸ್ತ್ರೀಯರ ಸೃಷ್ಟಿಶೀಲ ಘನತೆಯು ಸಮಾಜದ ಭಾವನೆಗಳಲ್ಲಿ ಅಪವ್ಯಾಖ್ಯಾನಕ್ಕೆ ಒಳಗಾಗಿ ಹೆಣ್ಣು ಹುಟ್ಟಿರುವುದೇ ಗಂಡಸಿನ ಸೇವೆಗಾಗಿ ಎಂಬ ದಾಸ್ಯ ಸ್ವಭಾವವು ಸ್ತ್ರೀ ಸುಮುದಾಯದಲ್ಲಿ ಉಳಿಯು ವಂತಾಯಿತು.

- ಪೂರ್ವಾಗ್ರಹದ ಮೌಲ್ಯಗಳು ಬೆಳೆದು ಅಖಂಡ ಮಾನವ ಸಾಧ್ಯತೆಯು ಸಂಕುಚಿತವಾಯಿತು.

- ಸಮಾಜದಲ್ಲಿ ಭೋಗ ಲಾಲಸೆಗಳು ನಿಯಂತ್ರಣ ಮೀರಿ ಹೆಣ್ಣನ್ನು ಭೋಗದ ವಸ್ತವಾಗಿಸಿಕೊಳ್ಳುವಂತಾಯಿತು.

ಹೀಗೆ ಹಿಡಿಯಾಗಿ ಹೆಣ್ಣಿನ ಅಂತರಂಗವನ್ನು ಪುರುಷ ಸಮಾಜವು ಆಕ್ರಮಣ ಶೀಲವಾಗಿ ಹಿಡಿದುಕೊಳ್ಳಲು ಸಾಧ್ಯವಾಗಿದೆ. ಇದರಿಂದ ಬಿಡುಗಡೆಯೇ ಸಾಧ್ಯವಿಲ್ಲವೆ ಎಂದರೆ ಅಂತಹ ಸಾಧ್ಯತೆಗಳನ್ನು ಕಠಿಣ ಮಾರ್ಗಗಳಲ್ಲಿ ಸ್ತ್ರೀ ಸಮುದಾಯಗಳು ಹುಡುಕಿಕೊಳ್ಳಬೇಕಾಗಿದೆ. ಹೋರಾಟದ ಮಾರ್ಗವೇ ಆಕೆಗೆ ಉಳಿದಿರುವ ಪ್ರಮುಖ ಅವಕಾಶ. ಸಂದಾನಗಳಿಂದಲೂ ಸಾಮರಸ್ಯ ಸಂಬಂಧ ಸಾಧ್ಯ. ಗಟ್ಟಿಯಾಗಿ ಬೇರು ಬಿಟ್ಟ

ಸನಾತನ ಮನಸ್ಸನ್ನು ಹಾಗೂ ಪುರುಷ ಪ್ರಭುತ್ವದ ಗುಣಗಳನ್ನು ಭಗ್ನಪಡಿಸುವುದು ಸಂದಾನದಿಂದ ಸಾಧ್ಯವಾಗುವುದಿಲ್ಲ. ವಿವೇಕದ ವಿಕಾಸವಾಗದೇ ಕೇವಲ ಸಂಘರ್ಷವೇ ಎಲ್ಲ ಬಗೆಯ ನ್ಯಾಯವನ್ನು ತಂದುಕೊಡಲಾರದು. ಸಂಘರ್ಷವನ್ನು ರೂಪಿಸುವುದೂ ಕೂಡ ಜಾತಿ ಧರ್ಮ ಮತ ಮೌಲ್ಯಗಳು ತುಂಬಿದ ಸಮಾಜದಲ್ಲಿ ಸಲೀಸಲ್ಲ. ಸ್ತ್ರೀ ಸಮುದಾಯ ಶೈಕ್ಷಣಿಕವಾಗಿ ಬಲ ಗೊಂಡು ಆರ್ಥಿಕವಾಗಿ ಬೇರು ಬಿಟ್ಟದೆ ಆಕೆಗೆ ತಂತಾನೆ ಆತ್ಮವಿಶ್ವಾಸ ಬಂದು ಪುರುಷನ ಕೃಪೆ ಇಲ್ಲದೆ ಬದುಕುವಂತಾಗುತ್ತದೆ. ಶಿಕ್ಷಣ, ಉದ್ಯೋಗ, ಸ್ವಯಂ ವಿವೇಚನೆ, ರಕ್ಷಣೆಗಳು ಸೂಕ್ತವಾಗಿ ಪಡೆಯುವಂತಾದರೆ ಇಂತಹ ಸಾಮಾಜಿಕ ಪಿಡುಗಿನ ನಿಷೇಧಗಳು ನಾಶವಾಗಬಲ್ಲವು. ಪುರುಷ ಪ್ರಕೃತಿ ಬೇರೆ ಬೇರೆ ಅಲ್ಲ. ಅವೆರಡೂ ಜೀವ ವಿಕಾಸದ ಜೋಡಿ ಸಾವಯವ ರಚನೆಯಂತಿವೆ. ಅಂತಹ ಜೀವ ಪ್ರೀತಿಯ ಸಾಧ್ಯತೆಯನ್ನು ಸಂಯೋಗಿಸುವ ಮೂಲಕ ಉಂಟಾಗಿರುವ ಲಿಂಗ ಬೇಧದ ಅಂತರವನ್ನು ನಿವಾರಿಸಬಹುದು.

## ಹೆಣ್ಣು ದೇಹದ ಮಾರುಕಟ್ಟೆ ಮತ್ತು ಮಾಧ್ಯಮ

ನಾಗರೀಕತೆಯ ಅಲೆಗಳು ಸಾಗಿ ಬಂದ ಮೇಲೆ ಆಧುನಿಕ ಜಗತ್ತು ತನ್ನ ಪೂರ್ವ ರೂಪಗಳನ್ನು ಅತ್ಯಂತ ನಾಜೂಕಾಗಿ ವಿಸ್ತರಿಸಿಕೊಂಡು ಬಂದಿದೆ. ಹೆಣ್ಣು ಗಂಡಿನ ಆಧುನಿಕ ಜೀವನ ಶೈಲಿಗಳಲ್ಲಿ ಮೌಲ್ಯಗಳಲ್ಲಿ ಒಪ್ಪಂದಗಳಲ್ಲಿ ಅನೇಕ ಮಾರ್ಪಾಟುಗಳಾಗಿವೆ. ಅಂತೆಯೇ ಶೋಷಣೆಯ ವಿಭಿನ್ನ ಕ್ರಮಗಳು ರೂಪಾಂತರಗೊಂಡು ತಮ್ಮ ಅಸ್ತಿತ್ವವನ್ನು ನಾಗರೀಕತೆಯ ಮುಖವಾಡಗಳಲ್ಲಿ ಉಳಿಸಿಕೊಂಡಿವೆ. ಆಧುನಿಕ ಸಮಾಜಗಳಲ್ಲಿ ಕಂಡುಬರುವ ಹೆಣ್ಣು ಗಂಡಿನ ಸಂಬಂಧಗಳು ಸುಧಾರಿಸಿವೆಯಾದರೂ ಹೆಣ್ಣಿನ ದೇಹ ಶೋಷಣೆಯ ಲೈಂಗಿಕ ವಿಧಾನಗಳು ಚಾಣಾಕ್ಷಗೊಂಡಿವೆ. ಎಚ್ಚೆತ್ತ ಮಹಿಳಾ ಲೋಕ ತನ್ನ ಹಕ್ಕುಗಳನ್ನು ಒಂದಿಷ್ಟು ಪ್ರಮಾಣದಲ್ಲಿ ಸಾಧಿಸಿಕೊಂಡಿದ್ದರೂ ಮೂಲಭೂತ ಪೂರ್ವಾಗ್ರಹಗಳು ನಾಶಗೊಂಡಿಲ್ಲ. ಆಧುನಿಕ ಜೀವನ ಶೈಲಿಗೆ ಪರಿಪೂರ್ಣವಾಗಿ ಸ್ತ್ರೀಲೋಕವನ್ನು ಒಳಪಡಿಸಲೂ ಸಾಧ್ಯವಾಗಿಲ್ಲ. ಹೆಣ್ಣಿನ ದೇಹದ ಸುತ್ತ ಆಧುನಿಕ ಅನುಭೋಗ ತಂತ್ರಗಳು ತಂತ್ರಜ್ಞಾನದ ಸಹಾಯವನ್ನು ಪಡೆದು ಆಕೆಯನ್ನು ನಿಯಂತ್ರಿಸುತ್ತವೆ. ಮಾತೃ ಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿದ್ದ ಫಲವಂತಿಕೆಯ ಪ್ರತಿಮೆ ಸಂಕೇತ ರೂಪಕಗಳು ಈಗ ಕೇವಲ ಮಾರುಕಟ್ಟೆಯ ಷೋಕೇಸಿನ ಸಂಗತಿಗಳು ಆಧುನಿಕ ಸಮಾಜವು ಹೆಣ್ಣನ್ನು 'ಮಾಲು' 'ಸರಕು' ಎಂದೇ ಭಾವಿಸಿದೆ. ಎಲ್ಲ ಬಗೆಯ ಆಧುನಿಕ ಅಭಿವ್ಯಕ್ತಿ ಮಾಧ್ಯಮಗಳಲ್ಲು ಹೆಣ್ಣು ಬೆಲೆಯುಳ್ಳ ವಸ್ತು. ಮಾರಟದ ಆಕರ್ಷಕ ಬಂಡವಾಳ. ಇಡೀ ಬಂಡವಾಳ ಶಾಹಿ ಜಗತ್ತು ತನ್ನ ಮಾರುಕಟ್ಟೆಯ ಜಾಹಿರಾತಿಗೆ ಹೆಣ್ಣ ದೇಹವನ್ನು ಅತ್ಯಂತ ಆಕರ್ಷಕವಾಗಿ ಮೋಹಕವಾಗಿ ಹಾಗೆಯೇ ಕಲಾತ್ಮಕವಾಗಿ ಬಳಸಿ ಕೊಳ್ಳುತ್ತಿದೆ.

ಈ ಹಿನ್ನೆಲೆಗಳಲ್ಲಿ ಆಧುನಿಕ ನಾಗರೀಕ ಜಗತ್ತು ಹೆಣ್ಣ ದೇಹವನ್ನು ಹೇಗೆ ಬಳಸಿಕೊಳ್ಳುತ್ತಿದೆ ಎಂಬುದನ್ನು ಈ ಕೆಳಗಿನ ಕೆಲವು ವಿಂಗಡಣೆಗಳಿಂದ ಪರಿಶೀಲಿಸಬಹುದು.

1. ಹೆಣ್ಣ ದೇಹ ಮತ್ತು ಮಾರುಕಟ್ಟೆ.
2. ಹೆಣ್ಣ ದೇಹ ಮತ್ತು ಮಾಧ್ಯಮ.
3. ಹೆಣ್ಣ ದೇಹ ಮತ್ತು ಲೈಂಗಿಕ ಉದ್ಯಮ.
4. ಹೆಣ್ಣ ದೇಹ ಮತ್ತು ಅನುಭೋಗಿ ಕಲೆ.
5. ಹೆಣ್ಣ ದೇಹ ಮತ್ತು ತಂತ್ರಜ್ಞಾನ.
6. ಹೆಣ್ಣ ದೇಹ ಮತ್ತು ಹೊಟ್ಟೆ ಪಾಡು.

ಈ ಒಂದೊಂದು ವಲಯದಲ್ಲೂ ಹೇಗೆ ಹೆಣ್ಣಿನ ಮಾರಾಟ ಮತ್ತು ಶೋಷಣೆಯ ರೂಪಗಳು ಕೆಲಸ ಮಾಡುತ್ತವೆ ಎಂಬುದನ್ನು ಗಮನಿಸಬಹುದು. ಆಧುನಿಕ ಜಗತ್ತು ದೇಹವನ್ನೇ ಒಂದು ಉದ್ಯಮವನ್ನಾಗಿಸಿಕೊಂಡಿದೆ. ಗಂಡಿನ ಮನಸ್ಸು ವ್ಯಾಪಾರದಲ್ಲಿ ತುಂಬ ಪಳಗಿದೆ. ಮಾರುಕಟ್ಟೆಯ ಪರಿಕಲ್ಪನೆಯು ಬೆಳೆದು ಬಂದದ್ದೆ ಗಂಡಸಿನ ಮೂಲಕ. ಉತ್ಪಾದನೆಯ ಎಲ್ಲಾ ಹೊರೆ ಹೊತ್ತಿದ್ದ ಸ್ತ್ರೀ ಸಮುದಾಯವು ವ್ಯಾಪಾರ ಬುದ್ಧಿಯಿಂದ ದೂರವಿತ್ತು. ಮಾರುವ ಕೊಳ್ಳುವ ವಿನಿಮಯ ಮಾಡಿಕೊಳ್ಳುವ ಸ್ವಭಾವವು ಪಶುಪಾಲನಾ ವ್ಯವಸ್ಥೆಯಿಂದ ಆರಂಭಗೊಂಡು ಕೃಷಿಯುಗದ ವೇಳೆಗೆ ಅದು ದೊಡ್ಡ ಮಾರುಕಟ್ಟೆಗಳನ್ನು ನಾಗರಿಕತೆಗಳ ಮೂಲಕ ವಿಸ್ತರಿಸಿಕೊಂಡಿತು. ಸ್ವತಃ ನಾಗರಿಕತೆಗಳು ಸೋತವರನ್ನು ಗುಲಾಮರನ್ನಾಗಿಸಿಕೊಂಡು ಮಾರಟ ಮಾಡುವ ಅಂತೆಯೇ ಹೆಣ್ಣುಗಳನ್ನು ಸೆರೆಹಿಡಿದು ಮಾರುವ ವಿಕೃತ ಬುದ್ಧಿಯು ಪುರುಷ ವರ್ಗಕ್ಕೆ ಬಂದದ್ದು. ಗುಲಾಮ ಪದ್ದತಿಯನ್ನು ಸ್ತ್ರೀ ಸಮಾಜ ಜಾರಿಗೊಳಿಸಲಿಲ್ಲ. ಎಲ್ಲವನ್ನೂ ತನ್ನದೆಂದು ಘೋಷಿಸಿ ಅದನ್ನು ಹೇಗೆ ಬೇಕಾದರೂ ಸರಕಾಗಿ ಕಂಡು ಮಾರುವ ಜಾಲವನ್ನು ಪಿತೃ ಪಧಾನ ಆರ್ಥಿಕ ವ್ಯವಸ್ಥೆಯು ಸ್ಥಾಪಿಸಿದೆ. ಅದರ ಆಧಾರದ ಮೇಲಿಂದಲೇ ಇವತ್ತಿಗೂ ಬಹುಕೋಟಿ ಉದ್ಯಮ ಪತಿಗಳೆಲ್ಲ ಗಂಡಸರೇ ಆಗಿದ್ದು ಜಗತ್ತಿನ ಮಾರುಕಟ್ಟೆಯು ಪುರುಷರ ಕೈಯಲ್ಲೇ ಇದೆ. ಅವರ ಈ ಮಾರು ಕಟ್ಟೆಗೆ ತಕ್ಕಂತೆ ಸಮಾಜವನ್ನೂ ಸ್ತ್ರೀ ಸಮುದಾಯವನ್ನು ಬಳಸಿಕೊಳ್ಳುತ್ತಿದ್ದು ಇದರಲ್ಲಿ ಹೆಣ್ಣದೇಹದ ದುರುಪಯೋಗ ಮಿತಿ ಮೀರಿದೆ.

**ಹೆಣ್ಣ ದೇಹ ಮತ್ತು ಮಾರುಕಟ್ಟೆ :** ವೇಶ್ಯಾವಾಟಿಕೆಯು ಪ್ರಾಚೀನವಾದುದೇ. ಮಧ್ಯಕಾಲೀನ ಸಮಾಜವು ವೇಶ್ಯಾವಟಿಕೆಯ ಸುವರ್ಣಯುಗವಾಗಿತ್ತು. ಈ ಹಂತದಲ್ಲೆ ಸಾಮ್ರಾಜ್ಯಗಳು ವೇಶ್ಯಾವಾಟಿಕೆಯ ಬೇರೆ ಬೇರೆ ಆಚರಣೆ ಸಂಪ್ರದಾಯಗಳನ್ನು ಪುಷ್ಟೀಕರಿಸಿದ್ದು ವಿಖ್ಯಾತ ವಿಜಯನಗರ ಸಾಮ್ರಾಜ್ಯದಲ್ಲಿ ವೇಶ್ಯಾವಾಟಿಕೆಗೆ ದೊಡ್ಡ ಮಾರುಕಟ್ಟೆಯಿತ್ತು. ಸೂಳೆ ಬೀದಿ ಎಂಬ ಗುರುತು ಈಗಲೂ ಉಳಿದಿದೆ. ಸ್ವತಃ ಕೃಷ್ಣದೇವರಾಯನೆ ಐನೂರು ವೇಶ್ಯೆಯರ ಸಂಪರ್ಕ ಹೊಂದಿದ್ದ ಎಂದು ಆತನ ಶಾಸನಗಳೆ ಹೇಳುತ್ತವೆ. ವೇಶ್ಯವಾಟಿಕೆಯ ಇತಿಹಾಸ ಬಹಳ ದೊಡ್ಡದು. ಜಗತ್ತಿನ ಉದ್ದಕ್ಕೂ ಇದರ ಮಾರುಕಟ್ಟೆ ಇದೆ. ವೇಶ್ಯವಾಟಿಕೆಗೆಂದೇ ಅರ್ಥಾತ್ ದೇಹ ಮಾರಾಟಕ್ಕೆಂದೇ ಸಾಂಸ್ಕೃತಿಕ ಧಾರ್ಮಿಕ ರಹದಾರಿಗಳಿದ್ದವು. ದೇವದಾಸಿ ಪದ್ದತಿಯಿಂದ ವೇಶ್ಯಾವಾಟಿಕೆ ಮಾಡಲು ಪರವಾನಗಿ ಇತ್ತು. ಹೆಣ್ಣದೇಹದ ಈ ಬಗೆಯ ಮಾರಾಟವು ಈ ಕಾಲದಲ್ಲಿ ತುಂಬ ಬದಲಾಗಿದೆ. ಹೈಟೆಕ್ ವೇಶ್ಯಾವಾಟಿಕೆಯು ತುಂಬ ಪಳಗಿದೆ. ಬಿಡಿಗಾಸಿನ ವೇಶ್ಯಾವಾಟಿಕೆಯಿಂದ ದಿನವೊಂದಕ್ಕೆ ಲಕ್ಷಗಟ್ಟಲೆ ದುಡಿದ ವೇಶ್ಯಾವಾಟಿಕೆಯು ಇದೆ.

ಅತ್ಯಂತ ಶ್ರೀಮಂತ ಉದ್ಯಮಗಳ ವೇಶ್ಯಾವಾಟಿಕೆಯ ಖರ್ಚು ವೆಚ್ಚಗಳು ಹೆಣ್ಣಿನ ಮಾರಟದಲ್ಲಿ ಪ್ರತಿಷ್ಠಿತವೆನಿಸಿವೆ.

ಈ ಬಗೆಯ ಲೈಂಗಿಕ ಮಾರುಕಟ್ಟೆಯಲ್ಲಿ ತುಳಿತಕ್ಕೆ ಒಳಪಟ್ಟವರೇ ಹೆಚ್ಚಿನ ಪ್ರಮಾಣದಲ್ಲಿ ಶೋಷಣೆಗೆ ಒಳಗಾಗುತ್ತಿದ್ದಾರೆ. ಅವರ ಬಡತನವೊಂದೇ ತಾತ್ಕಾಲೀನ ಕಾರಣವಾಗಿದ್ದರೂ ಅದರ ಹಿಂದೆ ಶತಮಾನಗಳಿಂದಲೂ ಪುರುಷ ಆಕೆಯ ಮೇಲೆ ದೂರ್ತವಾಗಿ ನಡೆಸಿದ ದಬ್ಬಾಳಿಕೆಯ ಮುಖ್ಯ ಕಾರಣವಾಗಿದೆ. ಸ್ವತಃ ಸ್ತ್ರೀ ವೇಶ್ಯಾವಾಟಿಕೆಗೆ ತಂತಾನೆ ದುಮುಕುವುದಿಲ್ಲ. ಅಂತಹ ಕೂಪಕ್ಕೆ ಪುರುಷ ಪ್ರಭುತ್ವದ ಭೋಗಿ ಸಮಾಜವು ಆಕೆಯನ್ನು ನೂಕುತ್ತದೆ. ಹೆಣ್ಣಿನ ಮಾರಟವು ನಿತ್ಯ ನಡೆಯುತ್ತಲೇ ಇದ್ದು ಅಮಾಯಕ ಹೆಣ್ಣುಗಳನ್ನು ಅಪಹರಿಸಿ ವಂಚಿಸಿ ಆಸೆಯ ಕುದುರೆಯನ್ನೇರಿಸಿ ಮೈ ಮಾರುವ ದಂದೆಗೆ ಕೆಡವಲಾಗುತ್ತದೆ. ಹೆಣ್ಣದೇಹದ ಮಾರುಕಟ್ಟೆಯ ಕ್ರೌರ್ಯವನ್ನು ವಿವರವಾಗಿ ಈ ಅಧ್ಯಯನದಲ್ಲಿ ಮಾಡಲು ಅವಕಾಶವಿಲ್ಲ. ಅದೊಂದು ಬೃಹತ್ ಜಾಲ. ಆ ಕೂಪಜಾಲದಲ್ಲಿ ಒಮ್ಮೆ ಹೆಣ್ಣು ಬಿದ್ದಳೆಂದರೆ ಆಕೆಗೆ ಮರು ಪಯಣದ ಸಾದ್ಯತೆಯೇ ಇರುವುದಿಲ್ಲ. ವೇಶ್ಯಾವಾಟಿಕೆಯ ಮಾರುಕಟ್ಟೆಯಲ್ಲಿ ಹೆಣ್ಣಿನ ದೇಹಕ್ಕೆ ಯಾವುದೇ ಘನತೆಯೂ ಇರುವುದಿಲ್ಲ. ಉಂಡು ಎಸೆದ ಎಂಜಲೆಲೆಗೆ ಸಮನಾಗಿ ಗಂಡು ಸಮಾಜ ವರ್ತಿಸುತ್ತದೆ. ಮಾರಾಟದ ಈ ಜಾಲದಲ್ಲಿ ಅಂತಃಕರಣ ತಾಯ್ತನ ಇವೆಲ್ಲವು ಅರ್ಥಹೀನವಾದ ಶಬ್ದಗಳಾಗಿವೆ.

**ಹೆಣ್ಣ ದೇಹ ಮತ್ತು ಮಾಧ್ಯಮ :** ದೃಶ್ಯ ಮಾಧ್ಯಮಗಳಲ್ಲಿ ಹೆಣ್ಣಿನ ದೇಹವೇ ಪ್ರಧಾನ ಆಕರ್ಷಣೆ. ಉತ್ಪಾದನೆಗೂ ವಸ್ತುತಃ ಹೆಣ್ಣ ದೇಹಕ್ಕೂ ಯಾವುದೇ ಸಂಬಂಧ ಇಲ್ಲದಿದ್ದರೂ ಮಾಧ್ಯಮದ ಮೂಲಕ ಮಾರುಕಟ್ಟೆಗೆ ಮಾಧ್ಯಮವಾಗಿ ದೇಹವನ್ನೆ ಇಲ್ಲಿ ಸೇತುವೆಯಾಗಿ ಬಳಸಿಕೊಳ್ಳಲಾಗುತ್ತದೆ. ಸಮೂಹ ಮಾದ್ಯಮಗಳ ಮೂಲಕ ಹರಿದು ಬರುವ ಜಾಹಿರಾತುಗಳಲ್ಲಿ ಹೆಣ್ಣಿನ ದೇಹವನ್ನು ತೋರುವ ಕ್ರಮದಲ್ಲಿ ಪುರುಷ ಧೋರಣೆಯೆ ಪ್ರಧಾನವಾಗಿದೆ. ಮಾಧ್ಯಮಗಳು ಪುರುಷ ಪರವಾಗಿ ಕೆಲಸ ಮಾಡುತ್ತವೆ. ಹೆಣ್ಣಿನ ನಾನಾ ರೂಪಗಳನ್ನು ಬಂಡವಾಳ ಮಾಡಿಕೊಂಡು ಅವಳ ನಿಜವಾದ ಒಳ ವ್ಯಕ್ತಿತ್ವವನ್ನು ಮರೆಮಾಡಲಾಗಿದೆ. ಮಾದ್ಯಮಗಳಿಗೆ ಹೆಣ್ಣ ದೇಹ ಬೆತ್ತಲಾದಷ್ಟೂ ಲಾಭಕರವೇ. ಆದ್ದರಿಂದಲೇ ರೋಚಕ ದೇಹ ಪ್ರದರ್ಶನ ದೃಶ್ಯಮಾದ್ಯಮಗಳಿಗೆ ಬೆಲೆಯುಳ್ಳದಾಗಿರುವುದು. ದೇಹವನ್ನು ಮಾತ್ರ ತೋರುವ ಮಾಧ್ಯಮ ಆಕೆಯ ಅಂತರಂಗವನ್ನು ತೋರಲು ಮುಂದಾಗುವುದಿಲ್ಲ. ಸಿನಿಮಾಗಳಲ್ಲಿ ಕಿರುತೆರೆಯ ಚಿತ್ರಗಳಲ್ಲಿ ಹೆಣ್ಣಿನ ಅಶ್ಲೀಲ ನೃತ್ಯ, ನಟನೆಗಳನ್ನು ಹದ್ದುಮೀರಿದ ಕ್ರಮದಲ್ಲಿ ತೋರಿಸುವುದು ಮಾರುಕಟ್ಟೆಯ ಅಭಿರುಚಿಗಳಿಂದಲೇ. ಮಾರಟದ ಬಲೆಯನ್ನು ಮಾಧ್ಯಮಗಳು ಬಹಳ

ಸುಂದರವಾಗಿ ನೇಯ್ದಿರುತ್ತವೆ. ಹೆಣ್ಣ ದೇಹದ ವ್ಯಾಪಾರದಿಂದ ಮಾಧ್ಯಮಗಳಿಗೆ ಕೋಟಿಗಟ್ಟಲೆ ಲಾಭವಿದೆ. ಹೆಣ್ಣನ್ನು ಅಶ್ಲೀಲವಾಗಿ ತೋರಿಸುವಲ್ಲಿ ಪುರುಷ ಸಮಾಜ ಸಂಕೋಚ ಪಟ್ಟುಕೊಳ್ಳುವುದಿಲ್ಲ. ಅಂತಹ ದೃಶ್ಯಗಳನ್ನು ಅದು ಹೆಮ್ಮೆಯಿಂದ ಕಾಮುಕವಾಗಿ ನೋಡುವುದಿದೆ. ಮಾಧ್ಯಮಗಳನ್ನು ಪುರುಷರೇ ನಿಯಂತ್ರಿಸುವುದರಿಂದ ಹಾಗು ಮಾಧ್ಯಮ ಉದ್ಯಮವು ಪುರುಷರ ಅಧಿಪತ್ಯದಲ್ಲೇ ಇರುವುದರಿಂದ ಈ ಬಗೆಯ ಅನೀತಿಯುತ ದೇಹ ಪ್ರದರ್ಶನವನ್ನು ಅವು ಮಾಡುತ್ತಿವೆ. ಮಾಧ್ಯಮಗಳ ಇಂದಿನ ಮುಖ್ಯ ಬಂಡವಾಳ ಹೆಣ್ಣೇ ಆಗಿದ್ದು ಇದನ್ನು ಸರಿಪಡಿಸಲು ಸ್ತ್ರೀ ಪುರುಷರಿಬ್ಬರೂ ಶ್ರಮಿಸಬೇಕಾಗಿದೆ.

**ಹೆಣ್ಣದೇಹ ಮತ್ತು ಲೈಂಗಿಕ ಉದ್ಯಮ :** ಕೋಕಶಾಸ್ತ್ರದ ಒಂದು ವಿದ್ಯೆ ಪ್ರಾಚೀನ ಭಾರತದಲ್ಲಿತ್ತು. ಅದು ಬೇರೆ ಬಗೆಯದು. ಇಂದಿನ ಹೈಟೆಕ್ ವೇಶ್ಯಾವಾಟಿಕೆಯು ಜಾಗತಿಕವಾಗಿ ಬೃಹತ್ ಉದ್ಯಮವಾಗಿ ಬೆಳೆದಿದೆ. ಜಗತ್ತಿನ ಯಾವುದೋ ಒಂದು ಮರೆಯಲ್ಲಿ ಕುಳಿತು ತನ್ನ ದೇಹವನ್ನು ಮತ್ತೊಬ್ಬರಿಗೆ ಅಂತರ್‌ಜಾಲದ ಮೂಲಕ ತೋರುತ್ತ ಹಣ ಸಂಪಾದಿಸಬಹುದು ಎಂದು ಲೈಂಗಿಕ ಉದ್ಯಮವು ಆಕರ್ಷಿಸುತ್ತದೆ. ಸ್ಪರ್ಷವೇ ಇಲ್ಲದೆ ಒಬ್ಬರನ್ನೊಬ್ಬರು ಅಂತರ್ ಜಾಲದ ಮೂಲಕಲೆ ಬೆತ್ತಲಾಗಿ ಕೂಡಬಹುದು ಎಂಬಷ್ಟು ತಂತ್ರಜ್ಞಾನವು ಲೈಂಗಿಕ ಉದ್ಯಮದಲ್ಲಿ ಬಳಕೆಯಾಗಿದೆ. ಜಾಗತಿಕ ಲೈಂಗಿಕ ಮಾರುಕಟ್ಟೆಯು ವಿಶ್ವದ ಯಾವುದೇ ದೊಡ್ಡ ಬಂಡವಾಳದ ಕಂಪನಿಗಳಿಗೂ ಮೀರಿದ ಹಣದ ವಹಿವಾಟನ್ನು ಮಾಡುತ್ತಿದೆ ಎಂದು ಅಂಕಿಅಂಶಗಳು ಹೇಳುತ್ತವೆ. ಅಂತರ್ ಜಾಲದ ಮೂಲಕವೇ ಅನೇಕ ಬಗೆಯ ಸೈಬರ್ ಅಪರಾಧಗಳು ಜರುಗುತ್ತಿವೆ. ಹೆಣ್ಣ ದೇಹದ ಇಂಚಿಂಚನ್ನೂ ತೋರುವ ವೆಬ್‌ಸೈಟ್‌ಗಳು ಅಸಂಖ್ಯಾತವಾಗಿವೆ. ಪೋರ್ನೋಗ್ರಫಿಯ ಈ ಜಾಲದಲ್ಲಿ ಹೆಣ್ಣ ದೇಹದ ಮಾರಟ ಅವ್ಯಾಹತವಾಗಿ ಸಾಗಿದ್ದು ಇದು ಆಧುನಿಕೋತ್ತರ ಲಿಂಗಸಂಬಂದಗಳಲ್ಲಿ ದೊಡ್ಡ ಸಮಸ್ಯೆಯಾಗಿ ಬೆಳೆಯುತ್ತಿದೆ. ಹಣವನ್ನು ಅತ್ಯಂತ ಸುಲಭವಾಗಿ ಸಂಪಾದಿಸಲು ಅಂತರ್ ಜಾಲವು ಸಲೀಸಾದ ದಾರಿಗಳನ್ನು ತೋರುತ್ತಿದೆ. ಹಳೆಯ ಬಿಡಿಗಾಸಿನ ಸೂಳೆಗಾರಿಕೆಯ ಮುಂದೆ ಹೈಟೆಕ್ ಸೆಕ್ಸ್ ವರ್ಕರ್ಸ್ ಧಂದೆಯು ತೀವ್ರವಾಗಿ ಮಾಹಿತಿ ತಂತ್ರಜ್ಞಾನದ ಮೂಲಕ ಸಾಗುತ್ತದೆ. ಭಾರತದಂತಹ ಅಭಿವೃದ್ಧಿ ಶೀಲ ದೇಶದಲ್ಲಿ ಈ ಬಗೆಯ ಲೈಂಗಿಕ ಉದ್ಯಮವು ಕ್ಷಿಪ್ರವಾಗಿ ಬೆಳೆಯುತ್ತಿದೆ. ವರ್ತಮಾನದ ಹಿನ್ನೆಲೆಯನ್ನು ಗಮನಿಸಿ ಅಧ್ಯಯನ ಮಾಡಿದವರ ಪ್ರಕಾರ ಮುಂದಿನ ದಶಕದಲ್ಲಿ ಭಾರತವು ಜಗತ್ತಿನ ಲೈಂಗಿಕ ಹೈಟೆಕ್ ಮಾರುಕಟ್ಟೆಗೆ ಬಹುದೊಡ್ಡ ಕೇಂದ್ರವಾಗಲಿದೆ. ಪಶ್ಚಿಮವು ಏಷ್ಯಾದ ಹೆಣ್ಣುಗಳ ದೇಹವನ್ನು ಕಾಣಲು ತುದಿಗಾಲಲ್ಲಿ ನಿಂತಿದೆ ಎಂಬ ಅಂಶವು ಬೆಳಕಿಗೆ ಬಂದಿದೆ. ಲೈಂಗಿಕ ಉದ್ಯಮವು

ಈಗ ಹಳ್ಳಿಗಳಿಗೂ ವ್ಯಾಪಿಸಿದೆ. ಭಾರತದ ಗ್ರಾಮಗಳೇ ಇವತ್ತಿನ ನಗರಗಳಲ್ಲಿ ತುಂಬುತ್ತಿರುವ ವೇಶ್ಯಾವಾಟಿಕೆಗೆ ಸರಬರಾಜು ಕೇಂದ್ರಗಳಾಗುತ್ತಿವೆ. ಗ್ರಾಮೀಣ ಭಾರತದ ಮಹಿಳೆಯರನ್ನು ಲೈಂಗಿಕ ಉದ್ದಿಮೆಗೆ ಬಳಸಿಕೊಳ್ಳುವುದು ಜಾಗತಿಕ ಲೈಂಗಿಕ ಮಾರುಕಟ್ಟೆಗೆ ಸುಲಭವೆನಿಸುತ್ತಿದೆ.

**ಹೆಣ್ಣ ದೇಹ ಮತ್ತು ಅನುಭೋಗಿ ಕಲೆ :** ಜನಪದ ಕಲೆಗಳಿಂದ ಹಿಡಿದು ಶಿಷ್ಟ ಕಲೆಗಳ ತನಕ ಹೆಣ್ಣ ದೇಹವು ಅನುಭೋಗಿ ಪ್ರಜ್ಞೆಯಲ್ಲಿ ಅಭಿವ್ಯಕ್ತಿ ಹೊಂದಿರುವುದನ್ನು ಗಮನಿಸಬಹುದು. ನೃತ್ಯ, ನಾಟಕ, ಪ್ರದರ್ಶನ ಕಲೆಗಳಲ್ಲಿ ಹೆಣ್ಣಿನ ಶಕ್ತಿ ಸಾಮರ್ಥ್ಯಗಳನ್ನು ಬಿಂಬಿಸುವುದಕ್ಕೆ ಬದಲು ಆಕೆಯನ್ನು ಶೃಂಗಾರದ ಕ್ರಮಗಳಲ್ಲಿ ಬಳಸಿಕೊಳ್ಳಲಾಗಿದೆ. ಪ್ರಾಚೀನ ಕವಿಗಳು ಕಡ್ಡಾಯವಾಗಿ ಶೃಂಗಾರ ರಸದಲ್ಲಿ ಮುಳುಗಿಯೇ ತಮ್ಮ ಕಾವ್ಯವನ್ನು ಮುಗಿಸುವುದು. ಪಾರಮಾರ್ಥಿಕ ಕಾವ್ಯದಲ್ಲೂ ಶೃಂಗಾರ ರಸವನ್ನು ದೇವರ ಸಮಕ್ಷಮದಲ್ಲೇ ಪಂಡಿತ ಪಾಮರ ಕವಿಗಳೂ ಬರೆದಿದ್ದಾರೆ ಎಂದರೆ ಅವರ ಪರಮಾರ್ಥಿಕ ನಿರೂಪಣೆಗಳನ್ನು ಮೆಚ್ಚಲೇ ಬೇಕು.

ಚಿತ್ರಕಲೆಯಲ್ಲೂ ಹೆಣ್ಣಿನ ದೇಹವನ್ನು ಉತ್ಕಟವಾಗಿ ಕಲಾವಿದರು ಚಿತ್ರಿಸುತ್ತಾರೆ. ಎಫ್.ಎಂ ಹುಸೇನ್ ಪ್ರಖ್ಯಾತ ಕಲಾವಿದರಿರಬಹುದು. ಅಂತವರು ಕೂಡ ಹೆಣ್ಣ ಲೈಂಗಿಕ ಭಾವನೆಗಳನ್ನೆ ತಮ್ಮ ಚಿತ್ರಗಳ ಬಂಡವಾಳ ಮಾಡಿ ಕೊಂಡಿದ್ದಾರೆ. ಅವರ ಸರಸ್ವತಿ ಚಿತ್ರದ ಹಗರಣವನ್ನು ಇಲ್ಲಿ ನೆನೆಯಬಹುದು. ದೇವತೆಯ ಪಾವಿತ್ರ್ಯ ಕಲ್ಪನೆಯನ್ನು ಭಗ್ನ ಪಡಿಸಲು ಅವರು ಸರಸ್ವತಿಯನ್ನು ಅರೆಬೆತ್ತಲೆಯಾಗಿ ಲೈಂಗಿಕ ಉದ್ದೀಪ್ತತೆಯಲ್ಲಿ ತೋರಿದ್ದನ್ನು ಅನೇಕರು ಉದಾರವಾಗಿಯೇ ನೋಡಿದರು. ಒಟ್ಟಿನಲ್ಲಿ ಅವರು ತಮ್ಮ ಉದ್ದೇಶ ಸಾಧನೆಗೆ ಹೆಣ್ಣ ಅಂಗಾಂಗಗಳನ್ನೇ ಬಂಡವಾಳ ಮಾಡಿಕೊಂಡಿರುವುದನ್ನು ಯಾರೂ ಪ್ರಶ್ನಿಸಲಿಲ್ಲ. ಅಶ್ಲೀಲ ಚಿತ್ರ ಎಂದು ಜರಿದರೇ ಹೊರತು ಹೆಣ್ಣ ದೇಹವನ್ನು ಹೀಗೆ ಬಳಸಿಕೊಳ್ಳುವುದು ಎಷ್ಟು ಸಮಂಜಸ ಎಂದು ಚರ್ಚಿಸಲಿಲ್ಲ. ಪ್ರಸಿದ್ಧ ಚಿತ್ರ ಕಲಾವಿದರೆಲ್ಲರು ಹೆಣ್ಣ ದೇಹವನ್ನು ಬಹಳ ಕಲಾತ್ಮಕವಾಗಿ ತೋರಿದ್ದರೂ ಅದು ನೈತಿಕ ಕಲಾತ್ಮಕತೆಯಲ್ಲ. ಗಂಡಿನ ದೇಹವನ್ನು ಯಾಕೆ ಹಾಗೆ ವಿಜೃಂಬಿಸಿ ಪುರುಷ ಕಲಾವಿದರು ಬರೆಯುವುದಿಲ್ಲ ಎಂಬುದನ್ನು ಗಮನಿಸಬೇಕು.

ಪ್ರಾಚೀನ ಕಾವ್ಯ, ನಾಟಕ ಮೀಮಾಂಸೆಯಲ್ಲೆಲ್ಲಾ ಹೆಣ್ಣ ದೇಹದ ವರ್ಣನೆ ಸಭ್ಯತೆಯನ್ನು ಮೀರಿದೆ. ದೇವಾಲಯದ ಮಿಥುನ ಶಿಲ್ಪಗಳಂತು ತಲೆತಗ್ಗಿಸುವಂತಿವೆ. ದೇವಾಲಯದ ಮೇಲಿನ ಭಕ್ತಿಗೂ ಅದರಲ್ಲಿನ ಬೆತ್ತಲೆ ಶಿಲ್ಪಗಳಿಗೂ ವೈರುಧ್ಯವಿದೆ. ವಾಸ್ತು ಶಿಲ್ಪದಲ್ಲಿನ ಬೆತ್ತಲೆ ಚಿತ್ರಗಳು ಕಲೆಯ ಹೆಸರಲ್ಲಿ ರಮಣೀಯವಾಗಿದ್ದರೂ ಹೀಗೆ ಹೆಣ್ಣನ್ನು

ಅಲಂಕಾರಿಕವಾಗಿ ಬಳಸಿಕೊಂಡು ಬಂದು ವಾಸ್ತು ಶಿಲ್ಪಕಲೆಯನ್ನು ಘನತೆಯಿಂದ ನೋಡಲಿಕ್ಕೆ ಬರುವುದಿಲ್ಲ.

**ಹೆಣ್ಣದೇಹ ಮತ್ತು ತಂತ್ರಜ್ಞಾನ :** ತಂತ್ರಜ್ಞಾನವು ಪುರುಷ ರೂಪಿಯಾದುದು. ತನಗೆ ಬೇಕಾದ ಎಲ್ಲ ತಾಂತ್ರಿಕ ಉಪಕರಣಗಳನ್ನು ಪುರುಷ ಆವಿಷ್ಕಾರ ಮಾಡಿಕೊಳ್ಳುತ್ತಾ ಬಂದು ಅವುಗಳನ್ನು ಆತನೇ ಬಳಸಿಕೊಳ್ಳುತ್ತಿದ್ದಾನೆ. ಸ್ತ್ರೀಯರ ತಂತ್ರಜ್ಞಾನವೆಂಬುದು ತುಂಬ ಕಡಿಮೆ. ಆಕೆಯ ತಂತ್ರಜ್ಞಾನದ ವಿವೇಕವು ವಿಕಾಸವಾಗಲು ಬೇಕಾದ ಅವಕಾಶಗಳನ್ನು ಪುರುಷ ವ್ಯವಸ್ಥೆ ನಿರ್ಭಂಧಿಸಿದ್ದರಿಂದ ಇಲ್ಲೂ ಕೂಡ ತಂತ್ರಜ್ಞಾನವು ಪುರುಷ ಪಕ್ಷಪಾತಿಯಾಯಿತು. ಇಪ್ಪತ್ತೊಂದನೆ ಶತಮಾನವು ಹೆಚ್ಚಾಗಿ ತಂತ್ರಜ್ಞಾನದ ಮೂಲಕವೇ ತನ್ನೆಲ್ಲ ಅಗತ್ಯಗಳನ್ನು ಪೂರೈಸಿಕೊಳ್ಳಲು ಮುನ್ನಡೆದಿದೆ. ತಂತ್ರಜ್ಞಾನದ ವೇಗವನ್ನು ಹೆಣ್ಣ ದೇಹಕ್ಕೂ ಅನ್ವಯಿಸಲಾಗಿದೆ. ಅಂದರೆ ಮಾಹಿತಿ ಮತ್ತು ಸಂಪರ್ಕ ತಂತ್ರಜ್ಞಾನದ ಆವಿಷ್ಕಾರಗಳಿಂದ ಹೈಟೆಕ್ ವೇಶ್ಯಾವಾಟಿಕೆಯನ್ನು ರೂಪಿಸಿಕೊಳ್ಳಲು ಸಾಧ್ಯವಾಗಿದೆ. ಹೆಣ್ಣ ದೇಹಕ್ಕೂ ತಂತ್ರಜ್ಞಾನಕ್ಕೂ ಮೇಲುನೋಟಕ್ಕೆ ಸಂಬಂಧವಿಲ್ಲ ಎಂಬಂತೆ ಕಂಡರೂ ತಾಂತ್ರೀಕೃತ ಸಮಾಜವು ಹೆಣ್ಣನ್ನು ತನ್ನ ತಾಂತ್ರೀಕೃತ ಜೀವನ ಮೌಲ್ಯಕ್ಕೆ ತಕ್ಕಂತೆ ದುಡಿಸಿಕೊಳ್ಳುತ್ತದೆ.

ಕಾಲ್ ಸೆಂಟರ್‌ಗಳಲ್ಲಿ ದುಡಿಯುವ ಹೆಣ್ಣುಮಕ್ಕಳು ತಂತ್ರಜ್ಞಾನದ ಎದುರು ಮಾತಿನ ಕೂಲಿಗಳಾಗಿ ದುಡಿಯ ಬೇಕಾದ ಪರಿಸ್ಥಿತಿಯಿದೆ. ಹೆಣ್ಣಿನ ದೇಹ ಮತ್ತು ಮನಸ್ಸುಗಳೆರಡೂ ಯಾರದೋ ತಂತ್ರಜ್ಞಾನದ ಕೂಲಿಗೆ ಒಳಪಡಬೇಕಾದ ಆರ್ಥಿಕ ಅವಸ್ಥೆ ನಿರ್ಮಾಣವಾಗುವುದು ನಿಜವಾದ ಲಿಂಗ ಸಮಾನತೆಯಲ್ಲ. ಮಾಹಿತಿ ತಂತ್ರಜ್ಞಾನದ ಗುಲಾಮರಾಗಿ ದುಡಿದ ಹೆಣ್ಣಿನ ಮನಸ್ಸು ದುರುಪಯೋಗವಾಗುವ ಅಪಾಯ ಇದ್ದೇ ಇದೆ. ಕಾಲ್‌ಸೆಂಟರ್‌ನಲ್ಲಿ ಎಲ್ಲವೂ ನೈತಿಕವಾಗಿರುವುದಿಲ್ಲ ಎಂಬುದು ವರ್ತಮಾನದ ವಿದ್ಯಮಾನಗಳಿಂದ ತಿಳಿಯುತ್ತಿದೆ.

ಸೈಬರ್ ಸೆಕ್ಸ್ ಕೆಫೆಗಳು ತಂತ್ರಜ್ಞಾನದ ಪರಿಣಾಮ ಇಂತಹ ವೆಬ್ ಸೈಟ್ ಗಳು ಅಬಾಲ ವೃದ್ದೆಯರಾಗಿ ಎಲ್ಲರನ್ನೂ ದೇಹತೋರ್ಪಡಿಕೆಗೆ ಒಳಪಡಿಸುತ್ತಿರುವ ಅಪಾಯಗಳನ್ನು ಅಮೇರಿಕಾ ದೇಶವು ತೀವ್ರವಾಗಿ ಎದುರಿಸುತ್ತಿದೆ. ಸೈಬರ್ ಸೆಕ್ಸ್ ಕೆಫೆಗಳು ಮುಂದುವರಿದ ದೇಶಗಳಲ್ಲಿ ದೊಡ್ಡ ಪಿಡುಗಾಗಿದೆ. ತಂತ್ರಜ್ಞಾನದ ಉಪಕರಣಗಳು ಹೆಣ್ಣನ್ನು ಮಾರುವ ಅಸ್ತ್ರಗಳಾಗಿಯೂ ಬಳಕೆಯಾಗುತ್ತಿವೆ. ಹೆಣ್ಣದೇಹದ ಬೆತ್ತಲೆಯನ್ನು ತಂತ್ರಜ್ಞಾನವು ಎಷ್ಟೊಂದು ವ್ಯವಸ್ಥಿತವಾಗಿ ಪುನರ್ ಮುದ್ರಿಸಿ ಕ್ಷಣಾರ್ಧದಲ್ಲಿ ಬೇಕಾದವರಿಗೆಲ್ಲ ಹಂಚುತ್ತದೆ ಎಂದರೆ ಅದರ ಮಾಯಾಜಾಲವು ಭೀಕರವಾಗಿದೆ. ಯಾವುದೇ ಸಭ್ಯ ಹೆಣ್ಣಿನ ಮಾನವನ್ನು ತಂತ್ರಜ್ಞಾನದ ಮೂಲಕ ಬೆಳಕು ಹರಿಯುವುದರ

ಒಳಗೆ ಬೀದಿಪಾಲು ಮಾಡಿ ಆಕೆಯ ಕೃತಕ ಹೇಹವನ್ನು ಬಟ್ಟಬಯಲು ಮಾಡಬಹುದು. ಯಾರದೊ ಮುಖ ಯಾರದೊ ದೇಹ ಹೊಂದಿಸಿ ಅವರ ವ್ಯಕ್ತಿತ್ವವನ್ನು ಮಾರಬಹುದು. ಬ್ಲೂ ಫಿಲ್ಮ್ ಇಂಡಸ್ಟ್ರಿಯ ತಂತ್ರಜ್ಞಾನದ ಬಲದಿಂದ ಬೆಳೆದದ್ದು. ಕೇವಲ ನೀಲಿಚಿತ್ರಗಳ ಮಾರಾಟವೊಂದರಿಂದಲೇ ಅಧೋಲೋಕದ ಹಣದ ವಹಿವಾಟು ಮಿಲಿಯನ್ ಗಟ್ಟಲೆ ಮೀರಿದೆ ಎಂದು ಹೇಳಲಾಗುತ್ತದೆ.

ಇಂತಹ ಸ್ಥಿತಿಯಲ್ಲಿ ಸೈಬರ್ ಸೆಕ್ಸ್ ಕೆಫೆಗಳ ಅಪರಾಧ ತಡೆಗಟ್ಟಲು ಕಾನೂನುಗಳನ್ನು ರೂಪಿಸಿದರೂ ಪ್ರಯೋಜನವಾಗುತ್ತಿಲ್ಲ. ಮಾತ್ರ ಮೂಲ ಪರಂಪರೆಯ ಹೆಣ್ಣ ದೇಹದ ಫಲವಂತಿಕೆಯ ಸಾಂಸ್ಕೃತಿಕ ನಂಬಿಕೆಗಳಿಗೂ ಹಾಗೂ ಇಪ್ಪತ್ತೊಂದನೆ ಶತಮಾನದ ಹೈಟೆಕ್ ಲೈಂಗಿಕ ಅಪರಾಧಗಳ ತಾಂತ್ರಿಕೃತ ಜಾಲಕ್ಕೂ ದೊಡ್ಡ ಅಂತರವಿದೆ ಎಂಬುದು ಸ್ಪಷ್ಟವಾದರೂ ಲಿಂಗಶೋಷಣೆ ಮತ್ತು ಲೈಂಗಿಕ ಅತಿಕ್ರಮಣಗಳ ಮೂಲ ಸ್ವರೂಪ ಮಾತ್ರ ಹಾಗೇ ಮುಂದುವರೆದಿರುವುದನ್ನು ಗಮನಿಸಲೇಬೇಕಾಗುತ್ತದೆ.

**ಹೆಣ್ಣದೇಹ ಮತ್ತು ಹೊಟ್ಟೆಪಾಡು :** ಹೆಣ್ಣದೇಹದ ಮೇಲೆ ಪುರುಷಾಧಿಪತ್ಯದ ಹೇರಿಕೆಗಳು ಒಂದು ಕಡೆಗಿದ್ದರೆ ಸ್ವತಃ ಹೆಣ್ಣು ತಾನಾಗಿಯೇ ತನ್ನ ದೀನಸ್ಥಿತಿಯಲ್ಲಿ ಹೊಟ್ಟೆಪಾಡಿಗಾಗಿ ತನ್ನ ದೇಹವನ್ನು ತಾನೇ ಮಾರಿಕೊಳ್ಳಬೇಕಾದ ಸ್ಥಿತಿಯನ್ನು ಭಿನ್ನವಾಗಿ ಪರಿಗಣಿಸಬೇಕಾಗುತ್ತದೆ. ಸಮಾಜದ ಎಲ್ಲ ಬಾಗಿಲುಗಳು ಮುಚ್ಚಿಕೊಂಡಾಗ ಹಾಗು ಬಂಧು ಬಳಗ ಎಂಬ ಸಂಬಂಧಗಳೂ ಹೊರಹಾಕಿದಾಗ ಅಂತಹ ಅನಾಥ ಹೆಣ್ಣುಗಳಿಗೆ ಬದುಕಲು ಬೇರೆ ದಾರಿಯಿರುವುದಿಲ್ಲ. ಅಂತಹವರನ್ನು ರಕ್ಷಿಸುವ ನೆಪದಲ್ಲಿ ಭಕ್ಷಿಸುವ ಪುರುಷರು ತಮ್ಮ ಬಲೆಗೆ ಕೆಡವಿಕೊಳ್ಳುತ್ತಾರೆ. ಅನಿವಾರ್ಯವಾಗಿ ಅಬಲೆಯರು ಬಲೆಗೆ ಬೀಳಲೇಬೇಕಾಗಿ ಬಂದು ತನ್ನನ್ನು ತಾನೇ ಮಾರಿಕೊಳ್ಳುತ್ತಾರೆ. ಈ ಹಿಂದಿನ ಅಧ್ಯಾಯಗಳಲ್ಲಿ ದುರ್ಬಲ ಸ್ಥಿತಿಯ ಹೆಣ್ಣುಮಕ್ಕಳ ಸ್ಥಿತಿಯನ್ನು ಚರ್ಚಿಸಲಾಗಿದೆ. ದಿಕ್ಕೆಟ್ಟ ಮಹಿಳೆ ಬದುಕಲು ಸ್ವದೇಹ ಮಾರಾಟಕ್ಕಿಳಿಯುವುದು ಅಪರಾಧವಲ್ಲ. ಇದು ತಪ್ಪೆನಿಸಿದರೂ ಇದರ ಹೊಣೆಗಾರಿಕೆಯನ್ನು ಪುರುಷ ವ್ಯವಸ್ಥೆಯೇ ಹೊರಬೇಕಾಗಿದೆ.

ಬಡತನವೂ ಕೂಡ ತೀರ ಕ್ರೂರವಾಗಿ ಹೆಣ್ಣನ್ನು ಇಂತಹ ಮಾರುಕಟ್ಟೆಗೆ ಗಿರಾಕಿಯನ್ನಾಗಿ ತಳ್ಳುತ್ತದೆ. ಎಷ್ಟೋ ಬಡ ವೇಶ್ಯೆಯರು ಹೊಟ್ಟೆಪಾಡಿಗೆ ಸೆರಗು ಹಾಸಿ ಸಂಸಾರದ ಜವಾಬ್ದಾರಿಯನ್ನು ನಿರ್ವಹಿಸುವುದಿದೆ. ದೇವದಾಸಿ ಪದ್ದತಿಯ ಬಲೆಗೆ ಸಿಲುಕಿದ ಮಹಿಳೆಯರು ಕೂಡ ಬಡತನದಿಂದ ಹಾಗೂ ಜಾತಿ ಶಾಪದ ಹಿಂಸೆಯಿಂದ ತಪ್ಪಿಸಿಕೊಳ್ಳಲು ಇಂತಹ ದಾರಿಗಳನ್ನು ಅನುಸರಿಸುವುದಿದೆ. ಹಸಿದ ಹೆಣ್ಣಿನ ಆತನ ಕರೆಯಲ್ಲೂ ಪುರುಷ ಸಮಾಜ ಅಂತಹ ಹೆಣ್ಣಿನ ದೇಹವನ್ನು ಕಾಮಿಸುತ್ತದೆ. ಇದು ಪಶುತ್ವದ ಕಾಮನೆ. ಪುರುಷನ ಪ್ರಜ್ಞೆಯು ಎಷ್ಟೊಂದು ಅಮಾನುಷವಾಗಿ ಹೆಣ್ಣ ದೇಹವನ್ನು

ಅನುಭೋಗಿಸುತ್ತದೆ ಎಂಬುದಕ್ಕೆ ವರ್ತಮಾನದಲ್ಲಿ ನಿತ್ಯ ಅಂತಹ ಪ್ರಸಂಗಗಳನ್ನು ಗಮನಿಸಬಹುದಾಗಿದೆ. ಕೆಳಜಾತಿಯಿಂದ ಬಂದ ದುರ್ಬಲ ಮಹಿಳೆಯರಂತೂ ಹತಾಶೆಯಲ್ಲಿ ಮೈಮಾರಿಕೊಳ್ಳುವ ಧಂದೆಗಿಳಿಯುವುದು ಸಾಮಾನ್ಯವಾಗಿದೆ. ಸ್ವತಃ ಹೆಣ್ಣುಮಕ್ಕಳನ್ನು ಬಾಲ್ಯದಲ್ಲೆ ವೇಶ್ಯಾವಾಟಿಕೆಗೆ ಮಾರುವ ತಂದೆ ತಾಯಿಗಳಿದ್ದಾರೆ. ಜಾತಿಯ ಬಲೆಯೇ ಜೀವವನ್ನು ಸಾವಿರ ಬಾರಿ ತೆಗೆಯುವಾಗ ಇನ್ನು ವೇಶ್ಯಾವಾಟಿಕೆಯ ನರಕವು ಹೆಣ್ಣದೇಹವನ್ನು ಇಂಚಿಂಚಾಗಿ ಕೊಲ್ಲುವುದಿದೆ. ಮೈ ಮಾರಿ ಬದುಕುವ ದುರಂತ ಯಾರಿಗೂ ಬರಬಾರದು ಎಂಬಷ್ಟು ಹಿಂಸೆ ಆ ಬಗೆಯ ಜೀವನದಲ್ಲಿ ತುಂಬಿದೆ. ಹೀಗೆ ಹೊಟ್ಟೆಪಾಡಿಗಾಗಿ ಮೈಮಾರಿಕೊಂಡ ಅಬಲೆಯರ ಬಾಳ ಕೊನೆಯ ಸಂಜೆಯು ದುರಂತ ಸಾವಿನಲ್ಲೆ ಕೊನೆಗೊಳ್ಳುತ್ತದೆ. ಹೀಗೆ ಸತ್ತವರ ದೇಹವನ್ನು ಊಳಲು ವಾರಸುದಾರರೇ ಇರುವುದಿಲ್ಲ. ಗಂಡು ಸಮಾಜ ಹೆಣ್ಣಿನ ಇಂತಹ ಸ್ಥಿತಿಯನ್ನು ಇನ್ನಾದರು ಪ್ರಾಮಾಣಿಕವಾಗಿ ಅರ್ಥಮಾಡಿಕೊಳ್ಳಬೇಕಾಗಿದೆ.

ಹೆಣ್ಣದೇಹದ ಮಾರುಕಟ್ಟೆಯು ಮುಂದಿನ ಕಾಲಮಾನದಲ್ಲಿ ಮತ್ತಷ್ಟು ಹೊಸರೂಪ ಧರಿಸಿ ಮುಂದುವರಿಯಬಲ್ಲದು. ಅದರ ಜಾಲದಲ್ಲಿ ಯಾವ ಹೆಣ್ಣು ಸಿಲುಕಬಾರದು ಎಂಬ ಸಂಕಲ್ಪ ಎಲ್ಲರಿಗೂ ಬಂದಾಗಲೇ ಹೆಣ್ಣನ್ನು ಮಾರುವ ಅಮಾನವೀಯ ಉದ್ಯಮವು ನಾಶವಾಗುವುದು. ಹಿಂದೂ ಧರ್ಮದ ಮೂಲಭೂತ ಕಲ್ಪನೆಗಳು ಕೂಡ ಈ ದಿಶೆಯಲ್ಲಿ ಪರಿಶೀಲನೆಗೆ ಒಳಪಡಬೇಕಾಗಿದೆ. 'ತಾಯ ಮೊಲೆ ಹಾಲೆ ನಂಜಾಗಿ ಕೊಲುವೊಡೆ ಇನ್ನಾರ ದೂರುವೆಯೊ ತಂದೆ' ಎಂಬ ಬಸವಣ್ಣನ ವಚನವು ಮಾರ್ಮಿಕವಾಗಿದೆ. ಕಾಯುವ ಪುರುಷನೆ ರುಂಡ ಚಂಡಾಡುವಂತಾದರೆ ತಾಯ ಎದೆ ಹಾಲ ಜೀವ ತಾನೆ ಹೇಗೆ ಸ್ರವಿಸೀತು! ತಾಯ ಮೊಲೆ ಹಾಲು ಕೊಲ್ಲುವುದಿಲ್ಲ. ಆದರೆ ಈ ಎದೆ ಹಾಲಿಗೆ ಎಪ್ಪಿಡುವ ಕೆಲಸಕ್ಕೆ ಪುರುಷನ ವಿಷ ಮನಸ್ಸು ಮುಂದಾಗುತ್ತದೆ. ಹೆಣ್ಣ ದೇಹದ ಮೂಲಕವೇ ಆಕೃತಿ ಪಡೆದುಕೊಂಡ ಗಂಡು ಸಮಾಜವು ತಾಯ ಅಂತಃಕರಣವನ್ನು ಪಾಲಿಸಬೇಕು. ನಿಸರ್ಗದ ಚೈತನ್ಯವಾದ ಹೆಣ್ಣದೇಹವು ಪುರುಷಾಕ್ರಮಣದಿಂದ ನಾಶವಾಗಬೇಕಾದ್ದಿಲ್ಲ. ಈ ಹಿನ್ನೆಲೆಯಲ್ಲಿ ಹೆಣ್ಣ ದೇಹದ ಮೇಲಿನ ಆಧುನಿಕ ಸಮಾಜಗಳ ಕಾರ್ಯ ಇನ್ನಾದರೂ ಮರೆಯಾಗಬೇಕು.

# ಸಂಶೋಧನೆಯ ಫಲಿತಗಳು – ಪರಿಹಾರಗಳು

ಹೆಣ್ಣ ದೇಹದ ಮೇಲಿನ ಪುರುಷಾಧಿಪತ್ಯದ ಹಲವು ಆಯಾಮಗಳನ್ನು ಈ ಅಧ್ಯಾಯದಲ್ಲಿ ವಿವರವಾಗಿ ಚರ್ಚಿಸಲಾಗಿದೆ. ಹೆಣ್ಣ ದೇಹದ ಮೇಲೆ ಹೇಗೆ ಪುರುಷ ಸಮಾಜವು ಯಜಮಾನ್ಯವನ್ನು ಸಾಂಸ್ಕೃತಿಕವಾಗಿ ಸ್ಥಾಪಿಸಿಕೊಂಡಿದೆ ಎಂಬುದನ್ನು ಕಾರಣಗಳ ಸಹಿತ ವಿಶ್ಲೇಷಿಸಲಾಗಿದೆ. ಹಾಗೆಯೆ ಹೇಗೆ ಲಿಂಗ ತಾರತಮ್ಯವು ಪಿತೃ ಪ್ರಧಾನ ವ್ಯವಸ್ಥೆಯ ಆಕ್ರಮಣದಿಂದ ಉಂಟಾಗಿದೆ ಎಂಬ ಅಂಶಗಳನ್ನು ಮನೋವಿಶ್ಲೇಷಣೆಯ ವಿಧಾನದಿಂದ ಪರಿಶೀಲಿಸಲಾಗಿದೆ.  ಅಂತೆಯೆ ಹೇಗೆ ಲಿಂಗ ತಾರತ್ಯಮದ ಇನ್ನೊಂದು ಉಗ್ರರೂಪವಾಗಿ ಜಾತಿ ವ್ಯವಸ್ಥೆ ಕೂಡ ಹೆಣ್ಣನ್ನು ಹಿಂಸಿಸಿದೆ ಎಂಬುದನ್ನು ವರ್ಣಾಶ್ರಮ ಪದ್ಧತಿಯ ಪುರೋಹಿತ ಶಾಹಿ ಹಾಗೂ ಭೂಮಾಲೀಕ ಬಂಡವಾಳಶಾಹಿ ನೆಲೆಗಳಿಂದ ವಿವರಿಸಲಾಗಿದೆ. ಇಲ್ಲಿ ವಿಶೇಷವಾಗಿ ಹೇಗೆ ದಲಿತ ಮಹಿಳೆಯರನ್ನು ಬೆತ್ತಲೆ ಸೇವೆಯಂತಹ ವಿಕೃತ ಪದ್ಧತಿಗಳ ಮೂಲಕ ಶೋಷಿಸಲಾಗಿದೆ ಎಂಬುದನ್ನು ಸ್ಥಳೀಯ ವಿವರ ಪುರಾಣಗಳಿಂದ ಶೋಧಿಸಲಾಗಿದೆ. ಇದೇ  ಹಿನ್ನಲೆಯಲ್ಲಿ ಧಾರ್ಮಿಕ ಮತ ಮೌಢ್ಯಗಳು ಹೆಣ್ಣಿನ ಮೇಲೆ ಯಾವ ಬಗೆಯ ನಿರ್ಭಂಧಗಳನ್ನು ಸೃಷ್ಟಿಸಿವೆ ಎಂಬ ಮಹತ್ವದ ಅಂಶಗಳನ್ನು ವಿಮರ್ಶಿಸಲಾಗಿದೆ. ಮನುಸ್ಮೃತಿ, ರಾಮಾಯಣ , ಮಹಾಭಾರತದಂತಹ ಮಹಾ ಕಾವ್ಯಗಳು ಕೂಡ ಹೆಣ್ಣಿಗೆ ಎಸಗಿರುವ ಅನ್ಯಾಯವನ್ನು ಪರಾಮರ್ಶಿಸಲಾಗಿದೆ.

ಇಂತಹ ಶೋಷಕ ಪ್ರವೃತ್ತಿಗಳು ಸಾಮಾಜಿಕ ವ್ಯವಸ್ಥೆಯಲ್ಲಿ ಹೆಣ್ಣನ್ನು ಹೇಗೆ ಕಾಣುತ್ತವೆ ಎಂಬುದನ್ನು ವಿಶ್ಲೇಷಿಸುತ್ತ ಹೆಣ್ಣಿನ ದೇಹದ ಮೇಲಿನ ನಿಷೇಧಗಳನ್ನು ಕೂಡ ಸಾಮಾಜಿಕ ನ್ಯಾಯದ ಆಶಯದಲ್ಲಿ ಶೋಧಿಸಲಾಗಿದೆ. ಹಾಗೆಯೆ ವರ್ತಮಾನದ ಸಮಾಜದಲ್ಲಿ ಹೆಣ್ಣ ದೇಹದ ಮಾರುಕಟ್ಟೆ ಹಾಗು ಮಾಧ್ಯಮವನ್ನು ಕುರಿತಂತೆ ಪರಿಶೀಲಿಸಲಾಗಿದ್ದು ಹೇಗೆ ಈ ಪಿಡುಗು ವಿಶ್ವ ವ್ಯಾಪ್ತಿಯಾಗಿ ಹೆಣ್ಣನ್ನು ಮಾರಾಟ ಮಾಡುತ್ತವೆ ಎಂಬುದನ್ನು ಕಾಣಿಸಲಾಗಿದೆ. ಒಟ್ಟಿನಲ್ಲಿ ಹೆಣ್ಣ ದೇಹದ ಮೇಲಿನ ಪುರುಷಾಧಿಪತ್ಯದ ಬೇರೆ ಬೇರೆ ಆಯಾಮಗಳನ್ನು ಸ್ತ್ರೀವಾದಿ ನೆಲೆಯಿಂದ ನಿರ್ವಚಿಸಲಾಗಿದೆ. ಹೀಗೆ ಪರಿಭಾವಿಸಿದ ಈ ಅಧ್ಯಯನದಲ್ಲಿ ಕಂಡುಕೊಂಡ ಅಂಶಗಳನ್ನು ಈ ಕೆಳಗಿನಂತೆ ಗುರುತಿಸಬಹುದು.

- ಸ್ತ್ರೀಯರ ಮೇಲಿನ ಲಿಂಗ ಶೋಷಣೆಯಿಂದ ಮಾನವ ವಿಕಾಸದ ನಡೆಗೆ ದೊಡ್ಡ ತೊಡುಕು ಉಂಟಾಗುತ್ತದೆ.
- ಲೈಂಗಿಕ ಶೋಷಣೆಯ ಹಲವಾರು ಜಾಡುಗಳಿಂದ ಲಿಂಗ ಸಂಬಂಧಗಳ ಜೈವಿಕ ಗುಣಗಳೇ ಸಂಕುಚಿತ ಗೊಳ್ಳುತ್ತವೆ.

- ಕೌಟುಂಬಿಕ ವ್ಯವಸ್ಥೆಯ ಮಾನವೀಯ ಮೌಲ್ಯಗಳು ಕುಸಿಯುತ್ತವೆ.
- ಸಮಾಜದಲ್ಲಿ ಏಕ-ಮುಖ ಆಲೋಚನಾಕ್ರಮ ಬೆಳೆದು ಪುರುಷ ಪೂರ್ವಾಗ್ರಹಗಳು ಎಲ್ಲ ನೆಲೆಗಳಿಗೂ ಹಬ್ಬಿ ಸ್ತ್ರೀ ಸಂವೇದನೆಯೇ ಮರೆಯಾಗುವ ಅಪಾಯವಿದೆ.
- ಪುರುಷ ಮನಸ್ಸು ಅತ್ಯಂತ ಪೂರ್ವಾಗ್ರಹದ್ದು ಹಾಗು ಅದಕ್ಕೆ ಯಾವತ್ತೂ ಆಳುವ ಅತಿಕ್ರಮಿಸುವ ಮತ್ತು ಅನುಮಾನಿಸುತ್ತಲೇ ಇರುವ ಸ್ವಭಾವದ್ದಾಗಿದೆ.
- ಹೆಣ್ಣ ದೇಹದ ಮಾರುಕಟ್ಟೆಯ ಜಾಲವು ಅತ್ಯಂತ ಚಾಣಾಕ್ಷವಾಗಿ ತಂತ್ರ ಜ್ಞಾನವನ್ನೂ ಬಳಸಿಕೊಂಡು ತನ್ನ ಶೋಷಣೆಯ ಪೂರ್ವ ರೂಪಗಳನ್ನು ನವೀಕರಿಸಿಕೊಂಡಿದೆ.
- ಸ್ತ್ರೀಯರ ಸಾಂಸ್ಕೃತಿಕ ಮೌಲ್ಯಗಳು ಪುರುಷ ದ್ವೇಷದವಲ್ಲ.
- ಮಾತೃ ಪ್ರಧಾನ ಮೌಲ್ಯವ್ಯವಸ್ಥೆಯು ಜಾತಿಯನ್ನಾಗಲಿ ವರ್ಗವನ್ನಾಗಲಿ ಲಿಂಗತಾರತಮ್ಯವನ್ನಾಗಲಿ ರೂಪಿಸಲಿಲ್ಲ.
- ಸ್ತ್ರೀ ಸಂವೇದನೆಯು ನಿಷ್ಠವಾದುದು,
- ಧರ್ಮವು ಪುರುಷ ರೂಪಿಯಾಗಿದ್ದು ಅದು ಗಂಡಸಿನ ಮೂಲಕ ಹುಟ್ಟಿ ಕೊಂಡುದ್ದಾಗಿದ್ದು ಅದಕ್ಕೆ ತಕ್ಕುನಾಗಿ ಎಲ್ಲ ಧರ್ಮಗ್ರಂಥಗಳು ದೇವ ಪುರುಷರು, ಸಾಂಸ್ಕೃತಿಕ ವೀರರು, ಕೊನೆಗೆ ದೇವರುಗಳೆಲ್ಲರೂ ಪುರುಷರೇ ಆಗಿದ್ದಾರೆ.
- ಹೆಣ್ಣ ದೇಹದ ಬಗೆಗಿನ ಪೂರ್ವಾಗ್ರಹದಿಂದಲೇ ಭಾಷೆಯು ಪುರುಷ ಧ್ವನಿಗೆ ತಕ್ಕಂತೆ ಬೆಳೆಯಿತು.
- ಹೆಣ್ಣ ದೇಹದ ಮೇಲಿನ ಹಲ್ಲೆಯಿಂದಾಗಿಯೆ ಹೆಣ್ಣಿನ ಮನಸ್ಸು ಆಘಾತದಿಂದ ಬಳಲಿ ಅದು ತನ್ನ ಸಹಜ ಸೃಷ್ಟಿಶೀಲ ಗುಣವನ್ನು ಬಚ್ಚಿಟ್ಟುಕೊಳ್ಳಬೇಕಾಯಿತು.
- ಮಾತೃತ್ವದ ಕಲ್ಪನೆಯು ಕೇವಲ ಕಲ್ಪಿತವಾದದ್ದು. ಅದರಿಂದ ಹೆಣ್ಣ ವಾಸ್ತವ ಸ್ಥಿತಿ ಸುಧಾರಿಸಲಿಲ್ಲ.
- ಹೆಣ್ಣಿನ ಮಾನಸಿಕ ಸ್ಥಿತಿಯು ನಿಸರ್ಗಬದ್ಧವಾಗಿದ್ದರಿಂದಲೇ ಅದು ಸಂಸ್ಕೃತಿಯನ್ನು ಗಾಢವಾಗಿ ಉಳಿಸಿಕೊಂಡು ಬಂದು ಮೌಖಿಕವಾದ ಅಭಿವ್ಯಕ್ತಿ ಕ್ರಮಗಳನ್ನು ಬೆಳೆಸಿಕೊಂಡಿತು. ಹೀಗಾಗಿಯೆ ಹೆಣ್ಣಿನ ಮೇಲಿನ ಆಕ್ರಮಣವನ್ನು ಆಕೆಯ ಮೌಖಿಕ ಪರಂಪರೆಯ ಸಾಹಿತ್ಯದಿಂದ ಮರೆಯಲು ಸಾಧ್ಯವಾಯಿತು.

- ಪುರುಷರ ಆಳ್ವಿಕೆಯ ಭಾವನೆಯು ಹೆಣ್ಣನ್ನು ಹಿಂಸಿಸಿದಿದ್ದರಿಂದ ಹೆಣ್ಣಿನ ಭಾವ ಲೋಕವು ಪುರುಷ ಭೀತಿಯಲ್ಲಿ ಅಂತರ್‌ಮುಖಿತ್ವವನ್ನು ರೂಢಿಸಿಕೊಳ್ಳ ಬೇಕಾಯಿತು. ಇದರಿಂದ ಮುಕ್ತ ಸ್ವಭಾವವೇ ಹೆಣ್ಣಿನಲ್ಲಿ ಕುಂಟಿತವಾಯಿತು.
- ಸಾರ್ವಜನಿಕವಾದ ಅವಹೇಳನ, ನಿಂದನೆ ಹಲ್ಲೆಯಿಂದ ಹೆಣ್ಣಿನ ಮನಸ್ಸು ದಾಸ್ಯ ಸ್ವಭಾವವನ್ನು ಅನುಸರಿಸಿತು. ಪುರುಷ ಪರಾಕ್ರಮಗಳಿಂದ ಜರ್ಜರಿತಗೊಂಡ ಸ್ತ್ರೀ ಮನಸ್ಸಿನಲ್ಲಿ ಸಾಮಾಜಿಕ ಭಯ ದಟ್ಟವಾಗಿ ನೆಲೆಗೊಂಡಿತು. ಹೀಗಾಗಿ ಸಾರ್ವಜನಿಕವಾಗಿ ಹೆಣ್ಣು ತನ್ನ ಅಸ್ತಿತ್ವವನ್ನು ಸ್ಥಾಪಿಸಲು ಸಾಧ್ಯವಾಗಲಿಲ್ಲ.
- ಹೆಣ್ಣಿಗೆ ಕೀಳರಿಮೆಯನ್ನು ಪುರುಷ ಪ್ರಭುತ್ವವು ಸೃಷ್ಟಿಸಿತು, ತನ್ನ ಸಾಮರ್ಥ್ಯವನ್ನೆ ಆಕೆ ಮರೆಯುವಂತೆ ಮಾಡಿದ್ದಲ್ಲದೆ ಆಕೆಯೆ ತಾನು ದುರ್ಬಲಳು ಎಂದು ಘೋಷಿಸಿಕೊಳ್ಳುವಂತೆ ಮಾಡಿತು.
- ಲೈಂಗಿಕ ಅಪರಾಧಗಳು ಎಗ್ಗಿಲ್ಲದೆ ಮುಂದುವರಿಯಲು ಪುರುಷ ಪಕ್ಷಪಾತಿಯಾದ ಸಂಹಿತೆಗಳು ಸಹಕರಿಸಿದವು. ಧರ್ಮ ಮತ್ತು ನಾಗರೀಕತೆಗಳೆರಡೂ ಸ್ತ್ರೀ ಲಿಂಗದ ಹತ್ಯೆಗೆ ಪರೋಕ್ಷವಾಗಿ ಬೆಂಬಲಿಸಿದವು ಇದರಿಂದ ಸ್ತ್ರೀ ಸಮುದಾಯವು ಕಿರಿದಾಗುತ್ತಿರುವುದನ್ನು ಜಾಗತಿಕವಾಗಿ ಗಮನಿಸಬಹುದು.

ಹೀಗೆ ಅನೇಕ ಬಗೆಯ ಅಂಶಗಳನ್ನು ಈ ಅಧ್ಯಯನದಿಂದ ಕಂಡುಕೊಳ್ಳಲಾಗಿದೆ. ಜೊತೆಗೆ ವಿಶೇಷವಾಗಿ ಹಿಂದೂ ಪುರುಷ ಮನಸ್ಸನ್ನು ಅದರ ಪ್ರಭುತ್ವ ಸ್ವಭಾವವನ್ನು ಲೈಂಗಿಕ ನಡತೆಯನ್ನು ವಿಶೇಷವಾಗಿ ಚರ್ಚಿಸಲಾಗಿದೆ. ಆದರೆ ಹೀಗೆ ಅಧೀನಳಾದ ಹೆಣ್ಣಿನ ಸ್ವಭಾವವನ್ನು ಪ್ರಧಾನವಾಗಿ ಚರ್ಚಿಸಲು ಅಧ್ಯಯನ ವ್ಯಾಪ್ತಿಯ ಕಾರಣದಿಂದ ಸಾಧ್ಯವಾಗಿಲ್ಲ. ಮುಂದಿನ ಸಂಶೋಧನೆಗಳಲ್ಲಿ ಆ ಬಗೆಯ ಸಾಧ್ಯತೆಯನ್ನು ಹುಡುಕಬಹುದು.

ಎಲ್ಲ ಅಧ್ಯಯನಗಳಿಗೂ ಒಂದು ಸಾಧ್ಯತೆಯ ಜೊತೆಗೆ ಮಿತಿಯೂ ಇರುತ್ತದೆ. ಯಾವ ಸಂಶೋಧನೆಯು ಪರಿಹಾರ ಸೂಚನೆಯಿಂದ ಮುಗಿದು ಹೋಗುವುದಿಲ್ಲ. ಆದಾಗ್ಯೂ ಹೆಣ್ಣ ದೇಹದ ಮೇಲಿನ ಪುರುಷಾಧಿಪತ್ಯದ ಶೋಷಣೆಯ ಹಿನ್ನಲೆಯಲ್ಲಿ ಕೆಲವು ಪರಿಹಾರಗಳನ್ನು ಇಲ್ಲಿ ಸೂಚಿಸಬಹುದು.

- ಪುರುಷ ಪೂರ್ವಾಗ್ರಹಗಳು ಪುರುಷ ಪ್ರಯತ್ನದಿಂದಲೆ ನಾಶವಾಗಬೇಕು.
- ಪುರುಷ ಪ್ರಜ್ಞೆಯು ಸ್ತ್ರೀ ಸಂವೇದನೆಯ ಭಾಗವಾಗಿಯೆ ವಿಕಾಸಗೊಳ್ಳಬೇಕು .
- ಪುರುಷ ಸಮಾಜಕ್ಕೆ ಅಂತಃಕರಣದ ಆಧ್ಯಾತ್ಮವಿರಬೇಕು.
- ಪುರುಷರ ಭೋಗ ಲಾಲಸೆಯು ನೈತಿಕ ಗಡಿಯನ್ನು ದಾಟಬಾರದು.
- ಆಳುವ , ಆಕ್ರಮಣ ಮಾಡುವ, ಅತಿಕ್ರಮಿಸುವ ಹಾಗೂ ಹೇರುವ , ಭೀತಿ ಹುಟ್ಟಿಸುವ ಪ್ರವೃತ್ತಿಗಳನ್ನು ಪುರುಷ ಸಮಾಜವು ರೂಪಾಂತರಿಸಿಕೊಂಡು ಸಹ ಮಾನವತ್ವವನ್ನು ಅಂತರ್ಗತಿಸಿಕೊಳ್ಳಬೇಕು.
- ಪುರುಷ ರೂಪಿ ಧರ್ಮವು ಉದಾರಗೊಳ್ಳಬೇಕು. ಸ್ತ್ರೀಯರಿಗೆ ಮುಕ್ತ ಅವಕಾಶ ಕಲ್ಪಿಸಬೇಕು.
- ಹೆಣ್ಣಿಗೆ ಸಹಜವಾದ ಎಲ್ಲ ಹಕ್ಕು ಬಾಧ್ಯತೆಗಳನ್ನು ಹಿಂತಿರುಗಿಸಬೇಕು.
- ಸರ್ಕಾರಗಳು ಸ್ತ್ರೀ ಸಮುದಾಯದ ಪರವಾಗಿ ಕಾರ್ಯ ನಿರ್ವಹಿಸಿ ಅವರ ಸಬಲೀಕರಣಕ್ಕೆ ಒದಗಿಬರುವ ಎಲ್ಲ ಬಗೆಯ ಯೋಜನೆಗಳನ್ನು ಪ್ರಾಮಾಣಿಕವಾಗಿ ಅನುಷ್ಠಾನಗೊಳಿಸಬೇಕು.
- ರಾಷ್ಟ್ರ ನಿರ್ಮಾಣದಲ್ಲಿ ಸಮಾಜ ಸುಧಾರಣೆಯಲ್ಲಿ ಕುಟುಂಬ ನಿರ್ವಹಣೆಯಲ್ಲಿ ಹೆಣ್ಣಿಗೆ ಸಮಾನ ಸ್ಥಾನ ಮಾನ ಜವಾಬ್ದಾರಿಗಳನ್ನು ನೀಡುವಂತಾಗಬೇಕು.
- ವಿವಾಹ ವ್ಯವಸ್ಥೆಯು ಪುರುಷ ಪಕ್ಷಪಾತಿಯಾಗಿರುವುದನ್ನು ತಪ್ಪಿಸಿ ವಿವಾಹದ ರಕ್ತಸಂಬಂಧಗಳು, ವಿವಾಹ ಸಂಬಂಧಗಳು ಸಮಾನ ಅಧಿಕಾರ ಹೊಂದುವಂತಾಗಬೇಕು.
- ಹೆಣ್ಣಿನ ಮೇಲಿನ ಎಲ್ಲ ಧಾರ್ಮಿಕ , ಸಾಂಸ್ಕೃತಿಕ ಹಾಗು ಲಿಂಗ ಸಂಬಂಧಿ ನಿಷೇಧಗಳನ್ನು ನಾಶಪಡಿಸಬೇಕು.
- ಹೆಣ್ಣಿಗೆ ಆರ್ಥಿಕವಾದ ಬಲಗಳನ್ನು ಒದಗಿಸಬೇಕು. ಉತ್ಪಾದನಾ ವ್ಯವಸ್ಥೆಯ ಒಡೆತನದ ಅಧಿಕಾರವನ್ನು ಸ್ತ್ರೀ ಸಮುದಾಯಕ್ಕೂ ಸಮನಾಗಿ ಹಂಚಬೇಕು.
- ರಾಜಕೀಯ ಮೀಸಲಾತಿಯನ್ನು ತಕ್ಕ ಉಪಯುಕ್ತ ಕ್ರಮದಲ್ಲಿ ಸಮಾಜದ ಎಲ್ಲ ಮಹಿಳೆಯರಿಗೂ ನೀಡುವಂತಾಗಬೇಕು. ಇದರಲ್ಲಿ ವಿಶೇಷವಾಗಿ ಆದಿವಾಸಿ,

ಅಲೆಮಾರಿ, ಹಾಗೂ ದಲಿತ ಮಹಿಳೆಯರಿಗೆ ಪ್ರತ್ಯೇಕ ಒಳ ಮೀಸಲಾತಿಯನ್ನು ಅನುಷ್ಠಾನಗೊಳಿಸಬೇಕು.

- ಪ್ರತಿಯೊಂದು ಗ್ರಾಮದಲ್ಲೂ ಗ್ರಾಮೀಣ ಮಹಿಳೆಯರ ಹಿತ ಕಾಯುವಂತಹ ಸಂಸ್ಥೆಗಳು ರೂಪುಗೊಂಡು ಅವರಿಗಾಗಿ ಪ್ರತ್ಯೇಕ ಕಾನೂನು ರಕ್ಷಣೆಯ ವ್ಯವಸ್ಥೆಯಾಗಬೇಕು.
- ಮಹಿಳೆಯರನ್ನು ಅಪಮಾನಿಸುವ ಯಾವುದೇ ರೀತಿಗೂ ಕಠಿಣ ಶಿಕ್ಷೆ ವಿಧಿಸುವಂತೆ ಕಾರ್ಯಾಂಗ, ನ್ಯಾಯಾಂಗ, ಶಾಸಕಾಂಗಗಳು ಕ್ರಿಯಾಶೀಲವಾಗಿರಬೇಕು.

ಈ ಬಗೆಯ ಕ್ರಮಗಳನ್ನು ಪರಿಹಾರದ ವಿವಿಧ ನೆಲೆಗಳನ್ನು ಸಮಾಜ ಮತ್ತು ಸರ್ಕಾರಗಳು ಪಾಲಿಸಿದಾಗ ಮಾತ್ರ ಲಿಂಗ ಸಂಬಂಧಿ ಸಮಸ್ಯೆಗಳು ಬಗೆಹರಿಯಬಲ್ಲವು. ಇಂತಹ ಇಚ್ಛಾಶಕ್ತಿಯನ್ನು ಅಖಂಡವಾಗಿ ಪುರುಷ ಹಾಗು ಮಹಿಳೆಯರಿಬ್ಬರೂ ಒಟ್ಟುಗೂಡಿಯೆ ನಿರ್ಮಿಸಬೇಕು. ಕೇವಲ ಮಹಿಳೆಯರ ಮೇಲೆಯೆ ಸುಧಾರಣೆಯ ಹೊರೆಯನ್ನು ಹಾಕಲಾಗದು. ಜೊತೆಗೆ ಇಡೀ ಮನುಕುಲದ ಸ್ವಭಾವವೇ ತನ್ನ ಹಳೆಯ ವಿರೂಪಗಳನ್ನು ತೊರೆಯಲು ಬೇಕಾದ ಜ್ಞಾನ ಪರಂಪರೆಗಳನ್ನು ಕಂಡುಕೊಳ್ಳಬೇಕು. ಅದಕ್ಕೆ ತಕ್ಕುದಾದ ಮಾನಸಿಕ ಬೆಳವಣಿಗೆಯೂ ತೀರ ಅಗತ್ಯ. ಮಹಿಳೆಯರು ತಮ್ಮ ಸಾಮರ್ಥ್ಯವನ್ನು ಪ್ರತಿಪಾದಿಸಲು ಮುಂದಾಗಬೇಕಾದುದೂ ಅಷ್ಟೇ ಅನಿವಾರ್ಯವಾಗಿದೆ. ಪುರುಷ ವ್ಯವಸ್ಥೆಯ ತಪ್ಪುಗಳನ್ನೆಲ್ಲ ಒಪ್ಪಿ ಶರಣಾಗುವುದು ಕೂಡ ತಪ್ಪೇ. ಅಂತಹ ಅನೀತಿಯ ವಿರುದ್ಧ ಆತ್ಯಂತಿಕವಾದ ಪ್ರತಿರೋಧವನ್ನು ಒಡ್ಡಬೇಕಾದದ್ದು ಮಹಿಳೆಯ ಕರ್ತವ್ಯ. ನಿಸರ್ಗದಲ್ಲಿ ಯಾವ ಜೀವಿಯು ಸಂಪೂರ್ಣವಾಗಿ ತನ್ನ ಅಸ್ತಿತ್ವವನ್ನು ಬೇರೊಂದು ಸ್ಥಿತಿಯ ಅವಲಂಬನೆಯಲ್ಲಿ ರೂಢಿಸಿಕೊಳ್ಳುವುದಿಲ್ಲ. ಅಂತಹ ಜೀವಿಗಳು ಇದ್ದರೂ ಅವು ಸಹಜ ಜೀವಿಗಳಲ್ಲ. ಪರಾವಲಂಬಿ ಜೀವಿಗಳಿಗೆ ಸ್ವಂತ ಅಸ್ತಿತ್ವ ಇರುವುದಿಲ್ಲ. ಮಹಿಳೆಯರು ಹೀಗೇ ಮುಂದುವರಿದರೆ ಪುರುಷ ವ್ಯವಸ್ಥೆಗೆ ಅಂಟಿಕೊಂಡ ಪರಾವಲಂಬಿ ಜೀವಿಯಾಗಿಯೆ ರೂಪಾಂತರಗೊಳ್ಳಬೇಕಾಗುತ್ತದೆ. ಆ ಬಗೆಯ ಜೈವಿಕ ದುರಂತ ಸೃಷ್ಠಿಯಲ್ಲಿ ತುಂಬಾ ದುಬಾರಿಯಾದ ನಷ್ಟ. ಅಂತದ್ದಕ್ಕೆ ಎಡೆ ಕೊಡದಂತೆ ಸ್ವತಃ ಮಹಿಳೆಯರೂ ಕೂಡ ತಮ್ಮ ಅಸ್ತಿತ್ವ ಸ್ಥಾಪನೆಯಲ್ಲಿ ಸ್ವಂತ ಚಹರೆಯಲ್ಲಿ ಜೀವಿಸಬೇಕಾಗಿದೆ. ಅಂತಹ ಕಾಲದ ವಿಕಾಸದಲ್ಲಿ ಈ ಹೊತ್ತಿನ ಸಮಾಜ ಒಂದಿಷ್ಟಾದರೂ ಎಚ್ಚರಗೊಂಡು ಆ ಬಗೆಯ ಕನಸಿನ ಸಕಾರಕ್ಕೆ ತೊಡಗಿರುವುದು ಭವಿಷ್ಯವನ್ನು ಜೀವಂತವಾಗಿಸಿದೆ. ಅಂತದರ ಒಂದು ಕಣದ ಆಶಯವೇ ಈ ಅಧ್ಯಯನದ ಉದ್ದಕ್ಕೂ ವ್ಯಾಪಿಸಿದ್ದು ಮುಂದಿನ ವಿಭಿನ್ನ ಅಧ್ಯಯನಗಳಿಗೆ ಕಿರುದಾರಿಯನ್ನಾದರೂ ಇಲ್ಲಿ ಕಂಡುಕೊಳ್ಳಲು ಸಾಧ್ಯವಾಗಿದೆ.

# ಸಮಾರೋಪ

**'ಹೆಣ್ಣ ದೇಹ ಮತ್ತು ಪುರುಷಾಧಿಕಾರ'** ಅಧ್ಯಯನವು ತಳಸಮುದಾಯಗಳ ಮಹಿಳಾ ಸಂವೇದನೆಯ ಸಮಾನತೆಯ ದಾಹದ ನಿರೂಪಣೆ. ನ್ಯಾಯ ನೈತಿಕತೆಯ ಇದರ ಅಂತರಾಳ. ಶುಷ್ಕವಾದ ಬೌದ್ಧಿಕ ಗರ್ವಕ್ಕಿಂತ ಮಾನವೀಯತೆಯ ಅಂತಃಕರಣವನ್ನು ಮತ್ತೆ ಮತ್ತೆ ನೆನಪಿಸುವುದು, ಒತ್ತಾಯಿಸುವುದು ಇಲ್ಲಿ ವಿಶೇಷವಾಗಿ ನಿರೂಪಿತವಾಗಿದೆ. ಸಂಸ್ಕೃತಿ ವಿಕಾಸದ ಜಾಡಿನಲ್ಲಿ ನಾಗರೀಕವಾದ ಆಧುನಿಕ ಜಗತ್ತು ನಿತಂತರವಾಗಿ ಸ್ತ್ರೀ ಸಮುದಾಯವನ್ನು ಹಂತಹಂತವಾಗಿ ಹೇಗೆ ವಂಚಿಸಿದೆ ಎಂಬುದನ್ನು ಸ್ಥಳೀಯ ವಿವರಗಳಿಂದ ಜಾತಿ ಧರ್ಮ ಪುರುಷ ವ್ಯವಸ್ಥೆಗಳ ತಂತ್ರಗಳಿಂದ ಪರಿಶೀಲಿಸಲಾಗಿದೆ. ಹೀಗಾಗಿ ಈ ಅಧ್ಯಯನವು ಏಕ ಕಾಲಕ್ಕೆ ಸ್ಥಳೀಯವಾಗುತ್ತಲೆ ಜಾಗತಿಕ ವಾದ ಆಯಾಮಗಳಿಂದಲೂ ಲಿಂಗ ಸಮಾನತೆಯ ಹಕ್ಕೊತ್ತಾಯವನ್ನು ಮಂಡಿಸುತ್ತದೆ.

ಹೀಗೆ ನ್ಯಾಯಿಕ ಧರ್ಮವನ್ನು ಅಪೇಕ್ಷಿಸುವ ಈ ಅಧ್ಯಯನವು ಹೆಚ್ಚಾಗಿ ಪುರುಷ ಮನೋಧರ್ಮದ ಮಿತಿಗಳನ್ನು ಆಧಾರವಾಗಿಟ್ಟುಕೊಂಡು ಮಹಿಳೆಯರ ಮೇಲಿನ ದೌರ್ಜನ್ಯಗಳನ್ನು ವಿಶ್ಲೇಷಿಸುತ್ತದೆ. ಪುರುಷ ವ್ಯವಸ್ಥೆಯು ಪರಿಪೂರ್ಣವಾಗಿ ಖಳನಾಯಕ ಪಾತ್ರಕ್ಕೆ ಅರ್ಹವಾದುದಲ್ಲ. ಅದು ಕೂಡ ಈ ಜೀವ ಜಾಲದ ನಿಸರ್ಗದ ಭಾಗವಾಗಿಯೆ ಸ್ತ್ರೀ ಸಮುದಾಯದ ಜೊತೆಗೇ ಬೆಳೆದು ಬಂದಿದೆ. ಅಂದ ಮೇಲೆ ಸ್ತ್ರೀ ಸಮುದಾಯಕ್ಕಿರುವ ಅನೇಕ ನೈಸರ್ಗಿಕ ಭಾವನಾತ್ಮಕ ಹಾಗು ನ್ಯಾಯದ ಗುಣಗಳು ಕಡ್ಡಾಯವಾಗಿ ಇದ್ದೇ ಇರುತ್ತವೆ. ಪುರುಷ ಲೋಕದ ಒಳಗಿನ ಅಂತಹ ಗುಣಗಳನ್ನು ಪುನರ್ ಅನ್ವಯ ಮಾಡಿಕೊಳ್ಳಲು ಬೇಕಾದ ಸಂಬಂಧವನ್ನು ಸ್ತ್ರೀ ಸಮುದಾಯ ಮಾಡಬೇಕು. ಒಳ್ಳೆಯ ಹಾಗೂ ಕೆಟ್ಟ ಎರಡು ಸ್ವಭಾವಗಳು ಇಬ್ಬರೂ ಮನುಷ್ಯರಾದ್ದರಿಂದ ಇಬ್ಬರಲ್ಲೂ ಬೆರೆತುಕೊಂಡು ಬಂದಿವೆ. ಮನುಷ್ಯನ ಸ್ವಭಾವದಲ್ಲಿರುವ ಕೇಡನ್ನು ಕಳೆದುಕೊಂಡು ವಿಕಾಸ ಸಾಧ್ಯತೆಗೆ ತನ್ನನ್ನು ತಾನು ಬದ್ಧನಾಗಿಸಿಕೊಳ್ಳುವುದೇ ನಾಗರೀಕತೆಯ ಲಕ್ಷಣ. ಇಷ್ಟಾದರೂ ಕೇಡಿನ ಅಂಶ ಕಡಿಮೆ ಆಗುತ್ತಲೇ ಇಲ್ಲ. ಇದಕ್ಕಾಗಿ ಸ್ತ್ರೀ ಪುರುಷ ಸಂಬಂಧಗಳೆರಡೂ ದುಡಿಯಬೇಕಾಗಿದೆ.

ಸೃಷ್ಟಿ ನಿಯಮದಲ್ಲಿ ಯಾರೂ ಮೇಲಲ್ಲ ಕೀಳಲ್ಲ ಎಲ್ಲವೂ ಅದರದರ ಅವಕಾಶ ಮತ್ತು ಬದುಕುಳಿಯುವ ಅಸ್ತಿತ್ವದಲ್ಲಿ ಆಯ್ಕೆಯಲ್ಲಿ ಸ್ವಾತಂತ್ರ್ಯವಾಗಿರಬೇಕು. ಅದನ್ನೆ ಗೌತಮ ಬುದ್ಧ ಪ್ರತಿಪಾದಿಸಿದ್ದು ಅಂತಹ ಪಯಣದಲ್ಲಿ ಮಾತ್ರ ಲಿಂಗ ಸಂಬಂಧಗಳು ಉನ್ನತ ನೆಲೆಯನ್ನು ತಲುಪಬಲ್ಲವು ಪುರುಷ ಮತ್ತು ಮಹಿಳೆಯ ವಿರುದ್ಧ ಚಲನೆ ನಿಜವಾದ

ಚಲನೆಯೂ ಅಲ್ಲ ಪ್ರಗತಿಯಂತು ಅಲ್ಲವೇ ಅಲ್ಲ. ಅದು ವಿಕಾಸದ ಕ್ರಮವನ್ನು ನಿರಾಕರಿಸುವಂತದು. ಅದು ಹಿನ್ನಡೆಯೆ ವಿನಃ ಮುನ್ನಡೆ ಅಲ್ಲ. ಬುದ್ಧ ನಿಜವಾದ ಮಾನವೀಯ ಸಂಬಂಧಗಳ ವಿಕಾಸವನ್ನು ಪ್ರತಿಪಾದಿಸಿದ್ದನ್ನೂ ಗಮನಿಸಬೇಕು. ಆಕರ್ಷಣೆ ವಿಕರ್ಷಣೆಗಳೆರಡೂ ಹೆಣ್ಣು ಗಂಡಿನ ಜೈವಿಕ ಸ್ವಭಾವ ಹಾಗೆಯೆ ಸಂಸ್ಕೃತಿ ಮತ್ತು ಧರ್ಮ ಕೂಡ ಸ್ತ್ರೀ ಪುರುಷರಿಬ್ಬರ ಮಧ್ಯೆ ಅನೇಕ ಅಪಕಲ್ಪನೆಗಳನ್ನು ಬೆಳೆಸಿವೆ. ಇವನ್ನೆಲ್ಲ ಈ ಕಾಲದಲ್ಲಿ ಮೀರಲು ಸಾಧ್ಯ. ಅಂತಹ ಸಾಧ್ಯತೆಯ ಅಧ್ಯಯನಗಳ ಕಡೆಗೆ ನಾವಿನ್ನು ಮುಂದಾಗಬೇಕಾಗಿದೆ.

# ಗ್ರಂಥ ಋಣ


“ಸ್ತ್ರೀವಾದ”,೨೦೦೩,ಎಚ್.ಎಸ್.ಶ್ರೀಮತಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

“ ಸ್ತ್ರೀವಾದ ಮತ್ತು ಭಾರತೀಯತೆ ” , ೧೯೯೮, ಧರಣೀ ದೇವಿ ಮಾಲಗತ್ತಿ, ಚೇತನ ಬುಕ್‌ಹೌಸ್, ಮೈಸೂರು-೨೪.

“ ಮಹಿಳೆ ಸಮಾಜ ಮತ್ತು ಸಂಸ್ಕೃತಿ ”, ೨೦೦೨, ಆರ್.ಇಂದಿರಾ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

“ ಮಹಿಳೆ ಶೋಷಣೆ-ಸವಾಲುಗಳು ”, ೨೦೦೫, ಸಂ. ವಿಜಯಶ್ರೀ ಸಬರದ, ಪ್ರಸಾರಾಂಗ, ಗುಲ್ಬರ್ಗ ವಿಶ್ವವಿದ್ಯಾಲಯ, ಗುಲ್ಬರ್ಗ

“ ಮಹಿಳೆ: ಅಂದು-ಇಂದು ”, ೨೦೦೧, ಜೋತ್ಸ್ನಾ ಕಾಮತ್, ಪ್ರೇಮಸಾಯಿ ಪ್ರಕಾಶನ, ಬೆಂಗಳೂರು-೪೦.

“ ಮಹಿಳೆ ಮತ್ತು ಜಾತಿ ”, ೨೦೦೫ , ಎಂ.ಉಷಾ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

“ ಮಹಿಳೆ ಸಂಕಥನ ”, ೨೦೦೩, ಗಾಯಿತ್ರೀ ನಾವಡ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು-೧೮.

“ ಮಹಿಳೆ ಮತ್ತು ಸಮೂಹ ಮಾಧ್ಯಮಗಳು ”, ೨೦೦೪, ಕೆ. ಸರೋಜಾ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

“ ಮಹಿಳಾ ಅಧ್ಯಯನ ”, ಸಂಪುಟ ೬, ಸಂಚಿಕೆ ೧-೨, ೨೦೦೪, ಸಂ. ಶಿವಾನಂದ. ಎಸ್. ವಿರಕ್ತಮಠ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

“ ಮಹಿಳಾ ಚಳುವಳಿ ಮತ್ತು ಮಹಿಳಾ ವಿಷಯಗಳು ” , ೨೦೦೪, ಎಂ.ಉಷಾ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

“ ಮಹಿಳಾ ಅಧ್ಯಯನ ” , ಸಂಪುಟ ೫ ಸಂಚಿಕೆ ೧-೨, ಜನವರಿ-ಡಿಸೆಂಬರ್ ೨೦೦೩, ಎಂ.ಉಷಾ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

“ ಮಹಿಳೆ ಬಿಡುಗಡೆಯ ಹಾದಿಯಲ್ಲಿ ”, ೧೯೯೬, ಎನ್. ಗಾಯಿತ್ರಿ, ನವ ಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು.

“ ಸ್ತ್ರೀವಾದ ಮತ್ತು ಮಹಿಳಾ ಅಧ್ಯಯನ ಪ್ರವೇಶಿಕೆ ”, ೨೦೦೭, ಡಿ.ಮಂಗಳಾ ಪ್ರಿಯದರ್ಶಿನಿ, ಪ್ರಕಾಶಕರು : ಎಚ್.ಎಸ್.ಶ್ರೀಮತಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

“ ಮಹಿಳಾ ಲೋಕ ”, ೨೦೦೫, ಸಂ. ನೇಮಿಚಂದ್ರ, ನವ ಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು.

“ ಮಹಿಳಾ ಸಾಮಾಜಿಕತೆ ”, ೨೦೦೭, ಜ್ಯೋತಿ ಶಶಿಕುಮಾರ್, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

" ಮಹಿಳೆ ಹಲವು ಮುಖಗಳು ", ೧೯೯೭, ನೀಲಮ್ಮ ಕತ್ನಳ್ಳಿ, ರೇಣುಕಾ ಪ್ರಕಾಶನ, ಶರಣ ನಗರ, ಶಹಬಾದ, ಗುಲ್ಬರ್ಗ.

" ಮೌಖಿಕ ಕಥನ ", ೨೦೦೬, ಮೊಗಳ್ಳಿ ಗಣೇಶ್, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

" ದಲಿತರು ಮತ್ತು ಜಾಗತೀಕರಣ ", ೧೯೯೫, ಮೊಗಳ್ಳಿ ಗಣೇಶ್, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

" ದಲಿತ ಚಿಂತನೆ ", ೨೦೦೫, ಮೊಗಳ್ಳಿ ಗಣೇಶ್, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ವಿದ್ಯಾರಣ್ಯ.

" ದಲಿತರ ಬದುಕು ಮತ್ತು ಸಂಸ್ಕೃತಿ ", ೨೦೦೦, ಅರ್ಜುನ ಗೊಳಸಂಗಿ, ವಿಮೋಚನಾ ಪ್ರಕಾಶನ, ಬೆಳಗಾವಿ.

" ದಲಿತರು ಮತ್ತು ಪರ್ಯಾಯ ರಾಜಕಾರಣ ", ೨೦೦೫, ಪಿ.ಮಹಾದೇವಯ್ಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

" ಎಲ್ಲಮ್ಮ ", ೨೦೦೩, ಎನ್.ಚಂದ್ರಪ್ಪ, ಮುಂಡ ಪ್ರಕಾಶನ, ಬೆಂಗಳೂರು-೬೬

" ಕರ್ನಾಟಕ ದಲಿತ ಸಂಸ್ಕೃತಿ ಪರಂಪರೆ ಭಾಗ-೨ (ಜಾತ್ರೆಗಳು)", ೧೯೯೩, ಎಸ್.ಹಿರೇಮಠ, ಸಮತಾ ಪ್ರಕಾಶನ, ಹೊಸಪೇಟೆ.

" ದಕ್ಷಿಣ ಕರ್ನಾಟಕದ ಜನಪದ ಕಾವ್ಯ ಪ್ರಕಾರಗಳು ", ೧೯೭೯, ಜೀ.ಶಂ.ಪರಮಶಿವಯ್ಯ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

" ಆಧುನಿಕ ಭಾರತದ ಮಹಿಳೆ ", ೨೦೦೧, ಎಚ್.ಎಸ್.ಶ್ರೀಮತಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

" ಧರ್ಮ-ಮಹಿಳೆ ಮತ್ತು ಸಮಾಜ ", ೨೦೦೧, ಶಾಂತಾ ಇಮ್ರಾಪುರ, ಚೇತನಾ ಪ್ರಕಾಶನ, ಧಾರವಾಡ.

" ವಿಚಾರ ಸಾಹಿತ್ಯ ಮತ್ತು ಹೆಣ್ಣು ", ೧೯೯೯, ಸಂ.ಅನುಸೂಯ ಕಾಂಬಳೆ, ವೈಚಾರಿಕ ಸಾಹಿತ್ಯ ಪ್ರಕಾಶನ, ರಾಯಬಾಗ.

" ಬೊಗಸೆ (ಮಹಿಳೆ ಸುತ್ತ ಮುತ್ತ) ", ೨೦೦೩, ಕಮಲಾ ಹಂಪನಾ, ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು.

" ಹೈದರಾಬಾದ್ ಕರ್ನಾಟಕದ ಗ್ರಾಮದೇವತೆಗಳ ಜನಪದೀಯ ಅಧ್ಯಯನ ", ೧೯೯೮, ವಾಲೀಕಾರ ಚೆನ್ನಣ್ಣ, ದಲಿತ ಬಂಡಾಯ ಸಾಹಿತ್ಯ ಪ್ರಕಾಶನ ಕೇಂದ್ರ, ಗುಲ್ಬರ್ಗ.

" ಸೊಲ್ಲು ", ೧೯೯೯, ಮೊಗಳ್ಳಿ ಗಣೇಶ್, ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು.

" ಆದಿಮ ", ೨೦೦೫, ಮೊಗಳ್ಳಿ ಗಣೇಶ್, ಸಾರಾಂಗ ಪ್ರಕಾಶನ, ತಿಪಟೂರು.

" ದೇಶಿ ", ೧೯೯೭, ಮೊಗಳ್ಳಿ ಗಣೇಶ್, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

" ಸಂಸ್ಕೃತಿ : ಶ್ರಮ ಮತ್ತು ಸೃಜನ ಶೀಲತೆ ", ೨೦೦೧,ಬರಗೂರು ರಾಮಚಂದ್ರಪ್ಪ, ಅಂಕಿತ ಪ್ರಕಾಶನ, ಬೆಂಗಳೂರು.

" ಪ್ರಜ್ಞೆ-ಪರಿಸರ (ಸಾಹಿತ್ಯದ ಒಳ ಹೊರಗು) ", ೨೦೦೪, ಯು.ಆರ್.ಅನಂತ ಮೂರ್ತಿ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

" ಸಾಂಸ್ಕೃತಿಕ ಅಧ್ಯಯನ ", ೨೦೦೪, ರಹಮತ್ ತರೀಕೆರೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಕನ್ನಡ ಭವನ, ಜೆ.ಸಿ.ರಸ್ತೆ, ಬೆಂಗಳೂರು.

" ಕನ್ನಡ ಅಧ್ಯಯನ ಚಳಿ ಸಂಚಿಕೆ ", ೧೯೯೯, ರಹಮತ್ ತರೀಕೆರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

" ಕರ್ನಾಟಕ ಕನ್ನಡಿ ", ೧೯೯೯, ಕನ್ನಡ ಭಾಷೆ ಮತ್ತು ಸಾಹಿತ್ಯ ವಿಭಾಗದ ಸದಸ್ಯರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

" ಜಾಗತೀಕರಣದ ಸ್ವರೂಪ ", ೨೦೦೭, ಸೀತಾರಾಂಯಚೂರಿ,ಉತ್ಸಾ ಪಟ್ನಾಯಕ್, ಅಧ್ಯಯನ ಪ್ರಕಾಶನ, ಪಂಡಿತ ಸಾರ್ವಜನಿಕ ಗ್ರಂಥಾಲಯ ಕಟ್ಟಡ, ಶಿರಸಿ, ಉ.ಕ.

" ಹಿಂದೂ ದತ್ತಕ ಮತ್ತು ಜೀವನಾಂಶ ಅಧಿ ನಿಯಮ ", ೨೦೦೬, ಶಂಕರ ಖಂಡೇರಿ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ,ವಿದ್ಯಾರಣ್ಯ.

" ಜಾನಪದ : ಸಾಂಸ್ಕೃತಿಕ ಆಯಾಮಗಳು ", ೧೯೯೮, ಹಿ.ಶಿ.ರಾಮಚಂದ್ರಗೌಡ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

" ಮಾನವ ಹಕ್ಕುಗಳು ", ೨೦೦೬, ಎನ್.ಎಸ್.ಸಂಗೊಳ್ಳಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

" ಕರ್ನಾಟಕದಲ್ಲಿ ದೇವದಾಸಿ- ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಅಧ್ಯಯನ ", ೨೦೦೧, ಚೆನ್ನಣ್ಣ ವಾಲೀಕಾರ, ಲಕ್ಷ್ಮೀ ಮುದ್ರಣಾಲಯ, ಚಾಮರಾಜ ಪೇಟೆ, ಬೆಂಗಳೂರು.

" ಬತ್ತದ ಚಿಲುಮೆ ", ೨೦೦೫, ಅನುಃ ಮಾಧವ ಐತಾಳ್, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

" ಸಂಸ್ಕೃತಿ ಕಥನ ", ೨೦೦೨, ಅಗ್ರಹಾರ ಕೃಷ್ಣಮೂರ್ತಿ, ಲಕ್ಷ್ಮಿ ಮುದ್ರಣಾಲಯ, ಬೆಂಗಳೂರು.

" ಹರಕೆಯ ಹೆಣ್ಣು ", ೧೯೯೩, ಕೆ.ಜಿ.ಗುರುಮೂರ್ತಿ, ವಿಮೋಚನಾ ಪ್ರಕಾಶನ, ವಿಮೋಚನಾ ದೇವದಾಸಿ ಪುನರ್ವಸತಿ ಸಂಘ, ಅಥಣಿ.

" ಸಾರ್ವಜನಿಕ ಸಮಸ್ಯೆಗಳು ", ೨೦೦೩, ಎಂ.ನಾರಾಯಣ, ಚೇತನ ಬುಕ್ ಹೌಸ್, ಮೈಸೂರು.

" ಕರ್ನಾಟಕ ಜಾತ್ರೆಗಳು ", ೧೯೮೮, ಸಂ. ಸಿ.ಎಸ್.ಶಿವಕುಮಾರ್, ಪ್ರಧಾನ ಸಂ. ಎಚ್.ಜೆ.ಲಕ್ಕಪ್ಪಗೌಡ, ಬಿ.ಆರ್. ಪ್ರಾಜೆಕ್ಟ್, ಮೈಸೂರು ವಿಶ್ವವಿದ್ಯಾಲಯ.

" ದಲಿತ ಅಧ್ಯಯನ ", ೨೦೦೫, ಸಂ. ಟಿ.ಆರ್. ಚಂದ್ರಶೇಖರ್, ಪ್ರಸಾರಾಂಗ, ಕನ್ನಡ ವಿಶ್ವ ವಿದ್ಯಾಲಯ, ಹಂಪಿ.

" ಚಂದ್ರಗುತ್ತಿ ರೇಣುಕಾಂಬೆ ಜಾತ್ರೆ ", ೧೯೯೭, ಎನ್. ಹುಚ್ಚಪ್ಪಮಾಸ್ತರ್, ಕರ್ನಾಟಕ ಜಾನಪದ ಯಕ್ಷಗಾನ ಅಕಾಡೆಮಿ.

" ಚಂದ್ರಗುತ್ತಿ ರೇಣುಕಾಂಬ ಜಾತ್ರೆ", ಎಚ್.ಎಸ್. ಮೋಹನ ಚಂದ್ರಗುತ್ತಿ, ಉಪ ಖಜಾನೆ ಸಾಗರ, ಶಿವಮೊಗ್ಗ ಜಿಲ್ಲೆ.

" ದಲಿತ ಕಥನ", ೨೦೦೬, ಮೊಗಳ್ಳಿ ಗಣೇಶ್, ಪ್ರಸಾರಾಂಗ, ಕನ್ನಡ ವಿಶ್ವ ವಿದ್ಯಾಲಯ, ಹಂಪಿ.

"ಬಯಲು? ಬೆತ್ತಲೆ!ಚಂದ್ರಗುತ್ತಿ_. . .",೨೦೦೬, ಇಂದಿರಾ ಕೃಷ್ಣಪ್ಪ, ಪ್ರಗತಿ ಪ್ರಿಂಟ್ ಕಮಿನಿಕೇಷನ್ಸ್, ಬೆಂಗಳೂರು.

"ಮನುಸ್ಮೃತಿ", ೨೦೦೫, ಅನುಶೇಷ ನವರತ್ನ, ಸಮಾಜ ಪುಸ್ತಾಕಲಯ, ಶಿವಾಜಿ ಬೀದಿ, ಧಾರವಾಡ-೦೧

"ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ -ಸಂಪುಟ- ೦೧", ಚಿದಾನಂದ ಮೂರ್ತಿ, ಸಪ್ನಬುಕ್ ಹೌಸ್, ಬೆಂಗಳೂರು.

"ಮನುಸ್ಮೃತಿ", ೧೯೬೯, ಅನು: ಚಕ್ರಕೋಡಿ ಈಶ್ವರ ಶಾಸ್ತ್ರೀ, ಸಮಾಜ ಪುಸ್ತಕಾಲಯ, ಶಿವಾಜಿ ಬೀದಿ, ಧಾರವಾಡ .

"ಪಾಸಿಟೀವ್ ತಿಂಕಿಂಗ್", ೨೦೦೪ ಅದಾಳ್ ಶಿವಕುಮಾರ್, ವಾಸನ್ ಪಬ್ಲಿಕೇಷನ್, ಬೆಂಗಳೂರು.

